# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್

'MUNJAVU' Kannada Weekly. KOPPA - CHM. ಫೋನ್: 114

6ನೇ ವರ್ಷ 3ನೇ ಸಂಚಿಕೆ ಕೊಪ್ಪ 6-9-1987 ಭಾನುವಾರ ಬೆಲೆ 50 ಪೈಸೆ


ರಾಷ್ಟ್ರ ಪ್ರಶಸ್ತಿ ವಿಜೇತ ಕನ್ನಡ ಚಲನಚಿತ್ರ ನಿರ್ದೇಶಕ

## ಗಿರೀಶ್ ಕಾಸರವಳ್ಳಿಗೆ ಹುಟ್ಟೂರಲ್ಲಿ ಸನ್ಮಾನ

(ವರದಿ : ಕೆ. ರಘುನಾಥ ಭಟ್)

**ಕಮ್ಮರಡಿ : ಎರಡನೇ ಬಾರಿಗೆ ರಾಷ್ಟ್ರಪ್ರಶಸ್ತಿ ಗಳಿಸಿದ ಕನ್ನಡದ ಹೆಮ್ಮೆಯ ಚಲನ ಚಿತ್ರ ನಿರ್ದೇಶಕ ಗಿರೀಶ್ ಕಾಸರವಳ್ಳಿಯವರನ್ನು ಅವರ ಹುಟ್ಟೂರಿನ ಜನತೆ ಆ. 27ರಂದು ಆತ್ಮೀಯವಾಗಿ ಸನ್ಮಾನಿಸಿ ಸಂತೋಷಪಟ್ಟರು**

ವಿದ್ಯಾ ಗಣಪತಿ ಸೇವಾ ಸಂಘ ವ್ಯವಸ್ಥೆಗೊಳಿಸಿದ್ದ ಈ ಸಮಾರಂಭದ ಅಧ್ಯಕ್ಷತೆಯನ್ನು ಹೆಗ್ಗೋಡಿನ ಕೆ. ವಿ. ಸುಬ್ಬಣ್ಣ ವಹಿಸಿದ್ದರು. ವೈಶಾಲಿ ಕಾಸರವಳ್ಳಿ ಮುಖ್ಯ ಅತಿಥಿಯಾಗಿದ್ದರು. ಮೊದಲಿಗೆ ಕಾಸರವಳ್ಳಿ ದಂಪತಿಗಳನ್ನು ಅಭಿಮಾನಿಗಳು ಮಂಗಳ ವಾದ್ಯಗಳೊಂದಿಗೆ ಮೆರವಣಿಗೆಯಲ್ಲಿ ಸಮಾರಂಭದ ವೇದಿಕೆಗೆ ಕರೆ ತಂದರು.

ಬರಹಗಾರ, ಉಪನ್ಯಾಸಕ ಜಿ. ಕೆ. ರಮೇಶ್ ಅಭಿನಂದನಾ ಭಾಷಣ ಮಾಡಿ, ಗಿರೀಶರ ಸಾಧನೆಗಳನ್ನು ವಿವರಿಸಿದರು. ಗಣಪತಿ ಸೇವಾ ಸಂಘದ ಅಧ್ಯಕ್ಷ ಕುಮಾರ ಗೌಡ ಕಾಸರವಳ್ಳಿಯವರಿಗೆ ಶಾಲು ಹೊದಿಸಿ, ಸ್ವರ್ಣ ಪದಕವಿತ್ತು ಅಭಿನಂದಿಸಿದರೆ, ಶ್ರೀಮತಿ ಕುಮಾರ ಗೌಡರು ವೈಶಾಲಿಯವರಿಗೆ ಶಾಲು ಹೊದಿಸಿ ಸನ್ಮಾನಿಸಿದರು.

ಅಸಂಖ್ಯ ಅಭಿಮಾನಿಗಳು ಗಿರೀಶ್‌ಗೆ ಮಾಲಾರ್ಪಣೆ ಮಾಡಿದರು.

ತಮ್ಮ ಬಾಲ್ಯದ ಸವಿನೆನಪುಗಳನ್ನು ಮೆಲುಕು ಹಾಕಿ ಭಾವಪರವಶರಾಗಿ ಮಾತನಾಡಿದ ಗಿರೀಶ್ ಅಭಿಮಾನಿಗಳಿಗೆ ಕೃತಜ್ಞತೆ ಅರ್ಪಿಸಿದರು. ವೈಶಾಲಿ ಮತ್ತು ಕೆ. ವಿ. ಸುಬ್ಬಣ್ಣ ಸಂದರ್ಭೋಚಿತವಾಗಿ ಮಾತನಾಡಿದರು.

ಗಿರೀಶರ ಸಾಧನೆಗಳಿಗೆ ಪ್ರೋತ್ಸಾಹಕರಾದ ಅವರ ಅಣ್ಣ ಉಮೇಶರವರಿಗೂ ವ್ಯವಸ್ಥಾಪಕರು ಹಾರಾರ್ಪಣೆ ಮಾಡಿ ಗೌರವಿಸಿದರು.

ಶ್ರೀಪಾದ ಜೋಯಿಸ್ ವಂದಿಸಿದರು. ಕೊನೆಯಲ್ಲಿ ಗಿರೀಶರ ಮೊದಲನೆಯ ರಾಷ್ಟ್ರ ಪ್ರಶಸ್ತಿ ವಿಜೇತ ಚಿತ್ರ 'ಘಟಶ್ರಾದ್ಧ'ದ ಪ್ರದರ್ಶನ ನಡೆಯಿತು.

ಜಿಲ್ಲೆ ಬರ ಸ್ಥಿತಿ ಪರಿಶೀಲನೆಗೆ

## ಪ್ರಧಾನಿ ರಾಜೀವ್ ಜಿಲ್ಲಾ ಪ್ರವಾಸ ?

ಶೃಂಗೇರಿ : ಚಿಕ್ಕಮಗಳೂರು ಜಿಲ್ಲೆಯಲ್ಲಿ ಮಳೆಯಿಲ್ಲದೆ ಉಂಟಾಗಿರುವ ಬರ ಪರಿಸ್ಥಿತಿಯನ್ನು ಪರಿಶೀಲಿಸಲು ಬರುವಂತೆ ಪ್ರಧಾನಿಗೆ ಸಂಸತ್ಸದಸ್ಯೆ ತಾರಾದೇವಿ ಮಾಡಿದ ಮನವಿಯನ್ನು ಅವರು ಒಪ್ಪಿದ್ದು, ಸೆಪ್ಟೆಂಬರ್ ಮೊದಲ ವಾರದಲ್ಲಿ ಜಿಲ್ಲೆಯಲ್ಲಿ ಪ್ರವಾಸ ಮಾಡಲಿರುವರೆಂದು ಜಿಲ್ಲಾ ಯುವ ಕಾಂಗ್ರೆಸ್ ಪ್ರಧಾನ ಕಾರ್ಯದರ್ಶಿ ಕೆ. ಆರ್. ದೇವೇಂದ್ರ ಹೆಗ್ಡೆ ತಿಳಿಸಿದ್ದಾರೆ.

ನೆಮ್ಮಾರು ಗ್ರಾಮೀಣ ಬ್ಯಾಂಕ್ ಮ್ಯಾನೇಜರ್ ವಿರುದ್ಧ

## ದಲಿತರ ಚಳುವಳಿ ಬೆದರಿಕೆ

**ಶೃಂಗೇರಿ : ಇಲ್ಲಿಗೆ ಸಮೀಪದ ನೆಮ್ಮಾರಿನಲ್ಲಿ ವಿಫಲತೆಯ ಅಂಚಿನಲ್ಲಿರುವ ಸುಧಾರಿತ ತಳಿ ಹಂದಿ ಸಾಕಣೆ ಕೇಂದ್ರದ ಫಲಾನುಭವಿಗಳು ಚಳುವಳಿ ಹೂಡುವ ಬೆದರಿಕೆ ಹಾಕಿದ್ದಾರೆ.**

ದ್ವಾಕ್ರಾ ಯೋಜನೆಯಡಿ 16 ಮಂದಿ ದಲಿತ ಮಹಿಳೆಯರಿಗಾಗಿ 1986ರಲ್ಲಿ ಆರಂಭಿಸಲಾಗಿದ್ದ ಈ ಘಟಕದ ಹಣಕಾಸಿನ ಉಸ್ತುವಾರಿಯಲ್ಲಿ ಅಲ್ಲಿನ ಚಿ.ಕೊ. ಗ್ರಾಮೀಣ ಬ್ಯಾಂಕ್ ಮ್ಯಾನೇಜರ್ ಅಶೋಕ್ ಕುಮಾರ್ ಸಿಕ್ಕಾಪಟ್ಟೆ ಅವ್ಯವಹಾರ ಮಾಡಿದ್ದಾರೆಂದಿರುವ ಫಲಾನುಭವಿಗಳು, ಈ ಬಗ್ಗೆ ಸಂಬಂಧಪಟ್ಟ ಮೇಲಧಿಕಾರಿಗಳಿಗೂ ಶಾಸಕರಿಗೂ ದೂರು ಕೊಟ್ಟಿದ್ದಾಗ್ಯೂ ಸಮರ್ಪಕವಾದ ತನಿಖೆ ನಡೆದಿದೆ, ಇದೀಗ ಆತನನ್ನು ಬೇರೆ ಕಡೆಗೆ ವರ್ಗಾವಣೆ ಮಾಡಿರುವುದಾಗಿ ತಿಳಿದು ಬಂದಿದೆ ಎಂದಿದ್ದಾರೆ.

ಇಲ್ಲಿನ ವ್ಯವಹಾರಗಳ ಬಗ್ಗೆ ತತ್‌ಕ್ಷಣ ತನಿಖೆ ನಡೆಸಿ ಘಟಕ ಪುನಃ ಯಶಸ್ವಿಯಾಗಿ ಮುಂದುವರಿಯುವಂತೆ ಮಾಡುವ ಮೂಲಕ ತಮಗೆ ನ್ಯಾಯ ದೊರಕಿಸಿ ಕೊಡಬೇಕೆಂದಿರುವ ದಲಿತರು, ಅದಿಲ್ಲದೆ ಹೋದರೆ ಶೃಂಗೇರಿ ತಾ|| ದಲಿತ ಸಂಘರ್ಷ ಸಮಿತಿಯ ನೇತೃತ್ವದಲ್ಲಿ ಸದರಿ ಬ್ಯಾಂಕಿನ ಆಡಳಿತ ವರ್ಗದ ವಿರುದ್ಧ ಪ್ರತಿಭಟನಾ ಚಳುವಳಿ ಆರಂಭಿಸುವುದಾಗಿ ಎಚ್ಚರಿಸಿದ್ದಾರೆ.

ಕೊಪ್ಪ ತಾ|| ಪ್ರೌಢಶಾಲಾ ಮಟ್ಟದ ಕ್ರೀಡಾಕೂಟ :

## ಕಿರಿಯರ ಉತ್ಸಾಹಕ್ಕೆ ತಣ್ಣೀರೆರಚಿದ ಮಳೆ

ಕೊಪ್ಪ : ಈ ತಾಲ್ಲೂಕಿನ ಪ್ರೌಢಶಾಲಾ ಕ್ರೀಡಾ ಕೂಟ ಸಂತ ಜೋಸೆಫರ ಪ್ರೌಢಶಾಲೆ ಆಶ್ರಯದಲ್ಲಿ ಆ. 20 ರಿಂದ 22ರವರೆಗೆ ನಡೆಯಿತು. ಲಯನ್ಸ್ ಅಧ್ಯಕ್ಷ ವಸಂತ ಅಜಿಲ ಕೂಟ ಉದ್ಘಾಟಿಸಿದರು. ತಹಸೀಲ್ದಾರ್ ಆರ್ ಶ್ರೀನಿವಾಸ್ ಅಧ್ಯಕ್ಷತೆ ವಹಿಸಿದ್ದರು. ಡಿಡಿಪಿಐ ರಾಮಸ್ವಾಮಿ ಅಯ್ಯಂಗಾರ್ ಅನಿರೀಕ್ಷಿತ ಅತಿಥಿಯಾಗಿದ್ದರು.

ಕಿಶನ್ ಸಿಂಗ್ ಸುಗಾರ ಅವರ ಅಧ್ಯಕ್ಷತೆಯಲ್ಲಿ ನಡೆದ ಸಮಾರೋಪ ಸಮಾರಂಭದಲ್ಲಿ ಎಂ. ಚಂದ್ರಶೇಖರಯ್ಯ ಮುಖ್ಯ ಅತಿಥಿಯಾಗಿದ್ದರು. ಶ್ರೀಮತಿ ವಂದನಾ ಸುಗಾರ ಬಹುಮಾನ ವಿತರಣೆ ಮಾಡಿದರು.

### ಕ್ರೀಡಾ ಪಟುಗಳ ಉತ್ಸಾಹದ ಮೇಲೆ ಸುರಿದ ಮಳೆ

ಆತಿಥೇಯ ಶಾಲೆಯವರು ಕ್ರೀಡಾಕೂಟವನ್ನು ಅಚ್ಚುಕಟ್ಟಾಗಿ ನಡೆಸಲು ಏರ್ಪಾಡು ಮಾಡಿದ್ದರಾದರೂ ಮೂರು ದಿನವೂ ಕ್ರೀಡಾ ಪಟುಗಳ ಉತ್ಸಾಹದ ಮೇಲೆ ಸತತವಾಗಿ ಸುರಿದ ಮಳೆ ಕೂಟವನ್ನು ಕೇವಲ ಒಂದು ನಾಮಕಾವಾಸ್ತೆ ಆಚರಣೆಯನ್ನಾಗಿಸಿತು.

### ಸೀಸನ್ ಬದಲಿಗೆ ಸಲಹೆ

ಈ ಕ್ರೀಡಾಕೂಟಕ್ಕೆ ಪ್ರತಿವರ್ಷ ಇದೇ ಗತಿಯಾಗುತ್ತಿದ್ದು, ಮಕ್ಕಳ ಕ್ರೀಡಾ ಪ್ರಾವೀಣ್ಯಕ್ಕೆ ಸೂಕ್ತ ಪ್ರೋತ್ಸಾಹ ದೊರಕುವಂತಾಗಲು ಕೂಟವನ್ನು ಕಡೇ ಪಕ್ಷ ಸೆಪ್ಟೆಂಬರ್ 15ರ ನಂತರವಾದರೂ ನಡೆಸಬೇಕೆಂದು ಪೋಷಕರು ಮತ್ತು ಅಧ್ಯಾಪಕ ವರ್ಗದವರು ಒಕ್ಕೊರಲಿನಿಂದ ಮಾಡಿದ ಒತ್ತಾಯವನ್ನು ಅನುಮೋದಿಸಿದ ಡಿಡಿಪಿಐ ಈ ಬಗ್ಗೆ ಮೇಲಧಿಕಾರಿಗಳಿಗೆ ವರದಿ ಮಾಡುವುದಾಗಿ ಭರವಸೆ ಇತ್ತರು.

### ಫಲಿತಾಂಶಗಳು

ತಾ|| ಕ್ರೀಡಾ ಕೂಟದ ಸಮಗ್ರ ಪ್ರಶಸ್ತಿ ಬಾಲಕಿಯರ ವಿಭಾಗದಲ್ಲಿ ಆತಿಥೇಯ ಶಾಲೆಗೂ, ಬಾಲಕರ ವಿಭಾಗದಲ್ಲಿ ಕೊಪ್ಪದ ಕಿರಿಯ ಕಾಲೇಜಿಗೂ ದಕ್ಕಿತು. ದ್ವಿತೀಯ ಸ್ಥಾನವನ್ನು ಬಾಲಕಿಯರ ವಿಭಾಗದಲ್ಲಿ ಕೊಪ್ಪ ಕಿ| ಕಾಲೇಜು ಮತ್ತು ಕುದುರೆಗುಂಡಿ ಶಾಲೆಗಳು ಹಂಚಿಕೊಂಡರೆ, ಬಾಲಕರ ವಿಭಾಗದಲ್ಲಿ ಬಸರಿಕಟ್ಟೆ ಪ್ರೌಢಶಾಲೆ ತನ್ನದಾಗಿಸಿಕೊಂಡಿತು.

ವೈಯಕ್ತಿಕ ಪ್ರಶಸ್ತಿಗಳೆರಡೂ ಕಿರಿಯ ಕಾಲೇಜಿನ ಪಾಲಾದವು (ಎಸ್. ಆರ್. ಶ್ರೀನಿವಾಸ್, ಡಿಂಪಲ್ ಅಜಿಲ). ಎರಡನೇ ಸ್ಥಾನಗಳನ್ನು ಹರಿಹರಪುರ ಶಾಲೆಯ ವಿಶಾಲಾಕ್ಷಿ ಮತ್ತು ಬಸರೀಕಟ್ಟೆ ಶಾಲೆಯ ಸೀಬು ಗಳಿಸಿದರು.

## ಪೋಲೀಸ್ ಠಾಣೆಯಲ್ಲಿ ಪ್ರೇಮಿಗಳ ಮದುವೆ !

ಕೊಪ್ಪ: ಇಲ್ಲಿಗೆ ಸಮೀಪದ ದೇವನ್ ಎಸ್ಟೇಟಿನಲ್ಲಿ ತೋಟ ಕಾರ್ಮಿಕರಾಗಿರುವ ಭೀಮಪ್ಪ ಮತ್ತು ಲಲಿತ ಎಂಬ ಪ್ರೇಮಿಗಳು ಪೋಲೀಸರ ಮಧ್ಯಸ್ಥಿಕೆಯಲ್ಲಿ ಠಾಣೆಯಲ್ಲೇ ದಂಪತಿಗಳಾದರು.

ವರ ಇಂಟಕ್ (ಕಾಂಗ್ರೆ) ಯೂನಿಯನ್‌ನವನೂ ವಧುವಿನ ತಂದೆ ಗುಡ್ಡೇಕೊಪ್ಪದ ಹನುಮಂತಪ್ಪ ಏಟಕ್ (ಸಿಪಿಐ) ನವರೂ ಆಗಿದ್ದು, ಬಹುಶಃ ಇದೇ ಕಾರಣಕ್ಕೆ ಅವರ ಮದುವೆಗೆ ತಂದೆಯ ಅನುಮತಿ ಸಿಗದಿದ್ದಾಗ ಲಲಿತ ಮನೆಯಿಂದ ಹೊರ ದೂಡಲ್ಪಟ್ಟು, ಭೀಮಪ್ಪನ ಮನೆಯಲ್ಲಿ ಆಶ್ರಯ ಪಡೆದಳು.

ಆಕೆಯ ತಂದೆ ಆ. 28ರಂದು ತನ್ನ ಮಗಳನ್ನು ಯಾರೋ ಅಪಹರಿಸಿದ್ದಾರೆಂದು ದೂರಿತ್ತಾಗ ತನಿಖೆಗೆ ತೆರಳಿದ ಸಬ್‌ಇನ್‌ಸ್ಪೆಕ್ಟರ್ ದುರ್ಗಯ್ಯ ಪರಿಸ್ಥಿತಿಯನ್ನರಿತು, ವಧೂ ವರರನ್ನು ಠಾಣೆಗೆ ಕರೆಸಿ, ಸಾರ್ವಜನಿಕರೆದುರು ಸರಳವಾಗಿ ಮದುವೆ ಏರ್ಪಡಿಸಿದರು. ಸುಮಾರು 200ಕ್ಕೂ ಹೆಚ್ಚು ಜನ ನಾಗರಿಕರು ಮತ್ತು ವರನ ಬಂಧುಗಳು ಮದುವೆಗೆ ಬಂದು ಸಿಹಿ ಸ್ವೀಕರಿಸಿದರು ವಧುವಿನ ಬಂಧುಗಳು ಮಾತ್ರ ಬಂದಿರಲಿಲ್ಲ

ಜಿಲ್ಲಾ ಪರಿಷತ್ ಇಂಜಿನಿಯರ್‌ಗಳ ಮಂದ ಗತಿ :

## ವೈಕುಂಠಪುರದಲ್ಲಿ ಕುಡಿವ ನೀರಿಗೆ ಕಷ್ಟ

(ವರದಿ : ಕಲ್ಕುಳಿ ವಿಠಲ ಹೆಗ್ಡೆ)

ಶೃಂಗೇರಿ : ಈ ತಾಲ್ಲೂಕಿನ ವೈಕುಂಠಪುರದಲ್ಲಿ 4 ವರ್ಷಗಳಿಂದ ಚಾಲ್ತಿಯಲ್ಲಿರುವ ಕುಡಿವ ನೀರಿನ ಯೋಜನೆಯ ಮೋಟರ್ ಈಗ ಎರಡೂವರೆ ತಿಂಗಳಿನಿಂದ ಸುಟ್ಟು ಹೋದ ಪ್ರಯುಕ್ತ ಕುಡಿಯುವ ನೀರಿಗೆ ತುಂಬಾ ತೊಂದರೆಯಾಗಿದೆ.

ಹಿಂದೆ ಪಿ. ಎಚ್. ಇ. ಇಲಾಖೆಯ ಉಸ್ತುವಾರಿಯಲ್ಲಿದ್ದ ಈ ಯೋಜನೆ ಈಗ ಜಿಲ್ಲಾ ಪರಿಷತ್ ಇಂಜಿನಿಯರಿಂಗ್ ವಿಭಾಗಕ್ಕೆ ವರ್ಗಾವಣೆಗೊಂಡಿದೆ. ಶೃಂಗೇರಿಯಲ್ಲಿ ಅದಕ್ಕಾಗಿ ಒಬ್ಬ ಸ|| ಎಕ್ಸಿಕ್ಯುಟಿವ್ ಇಂಜಿನಿಯರ್ ಸೇರಿ ಹತ್ತಾರು ಜನ ಹಿರಿ-ಕಿರಿಯ ಸಿಬ್ಬಂದಿಗಳು, ಜೀಪು, ಲಾರಿ ಎಲ್ಲಾ ಇದ್ದಾಗ್ಯೂ ಹಿಂದೆ ಒಬ್ಬ ಇಂಜಿನಿಯರ್ ಇದ್ದಾಗ ಆಗುವಷ್ಟು ಕೆಲಸವೂ ಈಗ ಆಗುತ್ತಿಲ್ಲ. ಏನೇನೋ ಕುಂಟು ನೆಪಗಳು.

ಸುಟ್ಟ ಮೋಟರ್ ಒಯ್ಯಲು 1 ತಿಂಗಳು ತೆಗೆದುಕೊಂಡ ಇವರು ಅದರ ರಿಪೇರಿಗೆ 1 ವರ್ಷವೇ ತೆಗೆದುಕೊಳ್ಳುತ್ತಾರೋ ಏನೋ! ಸ್ಥಳೀಯ ಜಿ. ಪ. ಸದಸ್ಯರಿಗೆ, ಖುದ್ದು ಅಧ್ಯಕ್ಷರಿಗೆ, ತಾ|| ಜನತಾ ಅಧ್ಯಕ್ಷರಿಗೆ ತಿಳಿಸಿದ್ದರೂ ಪ್ರಯೋಜನವಾಗಿಲ್ಲ.

ಇನ್ನು ಮುಂದಾದರೂ, ತಾ||ನಲ್ಲಿ ಇರುವ ಎಲ್ಲಾ ಶ್ರೇಣಿಯ ಮೋಟರ್‌ಗಳಿಗೂ ಕಡೇ ಪಕ್ಷ ಶ್ರೇಣಿಗೊಂದರಂತೆ ಬದಲಿ ಮೋಟರ್‌ಗಳನ್ನಿಟ್ಟುಕೊಂಡು, ಜಿಲ್ಲಾ ಪರಿಷತ್ತಿನ ಈ ಅಂಗ ಇನ್ನೇನಿಲ್ಲದಿದ್ದರೂ ಎಲ್ಲರ ಕುಡಿವ ನೀರಿಗಾದರೂ ಸೂಕ್ತ ವ್ಯವಸ್ಥೆ ಮಾಡೀತೆ ?

# ಮೂಢ ನಂಬಿಕೆ ....

ಮಾನ್ಯರೆ,

ಪತ್ರಿಕೆಗಳಲ್ಲಿ ವರದಿಯಾಗಿರುವಂತೆ ಮಧುಗಿರಿ ತಾಲ್ಲೂಕು ಪೋಲೇನಹಳ್ಳಿ ಗ್ರಾಮದಲ್ಲಿ ಹತ್ತು ಮಕ್ಕಳು ದಡಾರ ರೋಗದಿಂದ ಮರಣ ಹೊಂದಿರುವುದು ನಿಜ. **ಇದಕ್ಕೆ ಸ್ಪಷ್ಟ ಕಾರಣವೆಂದರೆ ಮಕ್ಕಳ ತಂದೆ ತಾಯಿಗಳ ಮೂಢನಂಬಿಕೆ ಹಾಗೂ ಅಂಧ ಶ್ರದ್ಧೆ.**

'ಅಮ್ಮ' ಅಥವಾ 'ತೊಟ್ಟು' ಎಂದು ನಂಬಿರುವ ದಡಾರ ರೋಗ ಬಂದ ತಕ್ಷಣ ಮಕ್ಕಳನ್ನು ಮನೆಯೊಳಗೆ ಕೂಡಿ ಹಾಕಿ 'ಅಮ್ಮ ಕೋಪಿಸಿಕೊಳ್ಳುತ್ತಾಳೆ' ಎಂಬ ಭಯದಿಂದ ಮಕ್ಕಳಿಗೆ ಬೇರೆಯವರ ಸಂಪರ್ಕವನ್ನು ತಂದೆತಾಯಿಗಳು ತಪ್ಪಿಸಿದ್ದಾರೆ. ದಡಾರ ಬಂದ ಮಕ್ಕಳು ಅತಿಸಾರಕ್ಕೆ ಒಳಗಾಗಿ ಸೂಕ್ತವಾದ ದ್ರವ ಆಹಾರವಿಲ್ಲದೆ ಪ್ರತಿರೋಧಕ ಶಕ್ತಿಯನ್ನು ಕಳೆದುಕೊಂಡ ಪರಿಣಾಮವಾಗಿ ನ್ಯೂನ ಪೋಷಣೆ ಉಂಟಾಗಿ ನರಳಿ ನರಳಿ ಸತ್ತಿವೆ. ಇಷ್ಟಾದರೂ ಮಕ್ಕಳನ್ನು ಯಾವುದೇ ವೈದ್ಯಕೀಯ ಚಿಕಿತ್ಸೆಗೆ ಒಳಪಡಿಸಲು ತಂದೆತಾಯಿಗಳು ನಿರಾಕರಿಸಿದ್ದಾರೆ; ಬದಲಾಗಿ ಹರಕೆ ಹೊತ್ತು ತೆಂಗಿನಕಾಯಿ ಒಡೆದಿದ್ದಾರೆ.

ಮಕ್ಕಳ ಸಾವಿನ ಪ್ರಮಾಣ ಆತಂಕಕಾರಿ ಪ್ರಮಾಣಕ್ಕೆ ಬರುವವರೆಗೂ ಈ ಸಂಗತಿಯನ್ನು ತಂದೆ ತಾಯಿಗಳು ಬಹಿರಂಗಪಡಿಸಿಲ್ಲ. ಈ ಗ್ರಾಮಕ್ಕೆ ನಾವು ಭೇಟಿ ಇತ್ತು ರೋಗರುಜಿನಗಳಿಂದ ನರಳುತ್ತಿದ್ದ ಮಕ್ಕಳನ್ನು ಆಸ್ಪತ್ರೆಗೆ ಸೇರಿಸಲು ಅವರ ಮನವೊಲಿಸಲು ಬಹಳ ಹೆಣಗಬೇಕಾಯಿತು. ಕಾರಣ ತಂದೆ–ತಾಯಿಗಳು, 'ಅಮ್ಮ ಕೋಪಿಸಿಕೊಳ್ಳುವಳೆಂದು' ಪ್ರತಿರೋಧಿಸಿದರು.

ಅಂತಿಮವಾಗಿ ದಲಿತ ಸಂಘರ್ಷ ಸಮಿತಿಯ ಯುವಕರು ಮಕ್ಕಳನ್ನು ಆಸ್ಪತ್ರೆಗೆ ದಾಖಲುಪಡಿಸಲು ತಂದೆ ತಾಯಿಗಳ ಮನವೊಲಿಸುವಲ್ಲಿ ಯಶಸ್ವಿಯಾದರು. ಈಗ 40 ಮಕ್ಕಳನ್ನು ಜಿಲ್ಲಾ ಆಸ್ಪತ್ರೆಗೆ ಸೂಕ್ತ ಚಿಕಿತ್ಸೆಗೆ ದಾಖಲು ಮಾಡಲಾಗಿದೆ.

ಆದುದರಿಂದ **ಪೋಲೇನಹಳ್ಳಿ ಗ್ರಾಮದ ಮಕ್ಕಳ ಸಾವು ಮೂಢ ನಂಬಿಕೆ ಮತ್ತು ಅಜ್ಞಾನದ** ಪರಿಣಾಮವೇ ಹೊರತು ಆರೋಗ್ಯ ಕೊರತೆಯಿಂದಾದುದಲ್ಲ.

**ಬಾಲ ವಿಕಾಸ ಯೋಜನಾಧಿಕಾರಿಗಳು**
ಸಮಗ್ರ ಬಾಲ ವಿಕಾಸ ಯೋಜನೆ,
ಮಧುಗಿರಿ, ತುಮಕೂರು ಜಿಲ್ಲೆ.

* * *

ಈ ಮೇಲಿನದು 1–9–87ರ 'ಪ್ರಜಾವಾಣಿ'ಯಲ್ಲಿ ಪ್ರಕಟವಾಗಿರುವ ಪತ್ರ. 'ಧರ್ಮ'ದ ಹೆಸರಿನಲ್ಲಿ ಹಬ್ಬಿರುವ ಅಜ್ಞಾನ ಮತ್ತು ಮೂಢನಂಬಿಕೆಗಳೆಂದರೆ ಏನು ಎಂಬುದಕ್ಕೆ ಈ ಪತ್ರ ಒಂದು ದಟ್ಟವಾದ ಉದಾಹರಣೆಯನ್ನು ನಮ್ಮ ಮುಂದಿಡುತ್ತದೆ.

**ವಿಚಾರ ಮಾಡದೆ ನಂಬುವುದೇ ಮೂಢ ನಂಬಿಕೆ.** ಅಜ್ಞಾನವೇ ಇದಕ್ಕೆ ಮೂಲ ತಳಹದಿಯಾದರೂ 'ಜ್ಞಾನಿ'ಗಳು ಅಥವಾ ಅಪಾರ ವಿದ್ಯಾವಂತರುಗಳು ಸಹ ಎಷ್ಟೋ ಕ್ಷುಲ್ಲಕ ಮೂಢ ನಂಬಿಕೆಗಳನ್ನು ಹೊಂದಿರುವುದಿದೆ. "ಮೂಢ ನಂಬಿಕೆ ತೊಡೆಯೋಣ, ಜನರನ್ನು ಯೋಚಿಸುವಂತೆ ಮಾಡೋಣ" ಎಂದು ಕಳಕಳಿಯಿಂದ ಹೇಳುವ, ಅಂತೆಯೇ ನಡೆಯುವ ಮನುಷ್ಯ ಪ್ರೇಮಿಗಳನ್ನು ನಾಸ್ತಿಕರೆಂದೂ, ರಾಕ್ಷಸರೆಂದೂ ಕರೆಯುವ ಜನ ತಮ್ಮನ್ನು ತಾವು ದೈವಭಕ್ತರೆಂದೂ ಜನೋದ್ಧಾರಕರೆಂದೂ ಹೇಳಿಕೊಳ್ಳುತ್ತಾರೆ.

ವಿಜ್ಞಾನದ ಎಲ್ಲ ಸುಖೋಪಭೋಗಗಳ

(3ನೇ ಪುಟಕ್ಕೆ)




## ನಾವೆಲ್ಲರೂ ಒಂದೇ

ಬಾರೋ ತಮ್ಮ
ನಾನು ನೀನು ಕೂಡಿಕೊಂಡು
ಆಡೋಣ.
ಮುಂಜಾವದಲಿ ಏಳೋಣ
ತಂದೆ–ತಾಯಿಯರಿಗೆ ನಮಿಸೋಣ
ಶಿಸ್ತಲಿ ಶಾಲೆಗೆ ಹೋಗೋಣ
ಜಾತಿ ಭೇದವ ತೊರೆಯೋಣ
ಪ್ರೀತಿ ಸ್ನೇಹವ ಬೆಳೆಸೋಣ
ಹಿರಿಯರಿಗೆ ಸಹಾಯ ಮಾಡೋಣ
ಕಿರಿಯರಿಗೆ ತಿಳುವಳಿಕೆ ನೀಡೋಣ
ದೊಡ್ಡವರಿಗೆ ತಲೆ ಬಾಗೋಣ
ಜಾತಿ, ಮತ ಭೇದವ ತೊರೆದು
ಬಾರೋ ತಮ್ಮ,
"ನಾವೆಲ್ಲರೂ ಒಂದೇ" ಎಂದು
ಹಾಡೋಣ

—ಸರೋಜ ವೈ. ಜಿ., ಯಡಗೆರೆ

## 2.8.87ರ 'ಜಾಣ ಪ್ರಶ್ನೆ'ಗಳಿಗೆ ಸರಿಯುತ್ತರಗಳು.

1. ಮನುಷ್ಯರು ಯಾವಾಗ ಪ್ರಶಾಂತರಾಗಿರುತ್ತಾರೆ?
ನಿದ್ರೆಮಾಡುವಾಗ.
2. ಇಟ್ಟುಕೊಳ್ಳಬೇಕೆಂದರೂ ಇಟ್ಟುಕೊಳ್ಳಲಾಗದುದು ಏನು?
ಶರೀರ.
3. ನಿಲ್ಲೆಂದರೂ ನಿಲ್ಲದಿರುವುದು ಯಾವುದು?
ಕಾಲ
4. ರೇಡಿಯೋ ಕಂಡು ಹಿಡಿದವನು ಯಾರು?
ಮಾರ್ಕೋನಿ.

## ಗುಡು ಗುಡು ಗುಮ್ಮಟವೇ ಓಡು....!

ಒಂದು ಊರಿನಲ್ಲಿ ಒಬ್ಬಳು ಅಜ್ಜಿ ಇದ್ದಳು. ಅವಳ ಮಗಳ ಮನೆ ಊರ ಹೊರಗೆ ಒಂದು ಬೆಟ್ಟದ ಮೇಲೆ ಇತ್ತು. ಒಮ್ಮೆ ಅಜ್ಜಿ ಮಗಳ ಮನೆಗೆ ಹೋಗಬೇಕೆಂದು ಹೊರಟಳು.

ಊರ ಹೊರಗೆ ದೊಡ್ಡ ಕಾಡು. ಕಾಡಿನ ದಾರಿಯಲ್ಲಿ ಹೋಗುವಾಗ ಒಂದು ಹುಲಿ ಅಡ್ಡ ಹಾಕಿತು. "ನಿನ್ನ ತಿನ್ತೀನಿ" ಅಂತ ಕೂಗ್ತು. ಅದಕ್ಕೆ ಅಜ್ಜಿ ಹೇಳಿದ್ಲು–"ಮಗ್ಳ ಮನೆಗೆ ಹೋಗಿ ಬೆಣ್ಣೆ, ತುಪ್ಪ ತಿಂದು ದಪ್ಪ ಆಗಿ ಬರ್ತೀನಿ. ಈಗ ನನ್ನ ಮೈಮೇಲೆ ಮೂಳೆಗಳೇ ಜಾಸ್ತಿ ಇವೆ" ಅಂತ ಹೇಳಿದ್ಲು. ಹುಲಿ ಬಿಡ್ತು. ಹೀಗೇ ಮುಂದೆ ದಾರಿಯಲ್ಲಿ ಅಡ್ಡ ಹಾಕಿದ ತೋಳ, ಕರಡಿ, ಸಿಂಹಗಳಿಗೂ ಇದೇ ಉತ್ತರ ಹೇಳಿ ತಪ್ಪಿಸಿಕೊಂಡ್ಲು.

ಮಗಳ ಮನೆಯಲ್ಲಿ ಒಂದು ತಿಂಗಳು ಕಳೆದಳು. ಒಳ್ಳೆ ಊಟ ಮಾಡಿ ಗುಂಡಗೆ ಕುಂಬಳ ಕಾಯಿ ಆದ್ಹಾಂಗಾದ್ಲು. ಹೊರಡೂ ದಿನ ಅಳಕ್ಕೆ ಶುರು ಮಾಡಿದ್ಲು. ಮಗಳು ಅವ್ಳಿಗೆ ಸಮಾಧಾನ ಮಾಡಿ ಒಂದು ಉಪಾಯ ಹೇಳಿಕೊಟ್ಟು.

ಒಂದು ದೊಡ್ಡ ಕುಂಬಳಕಾಯಿನ ಕೊರ್ದು ತಿರುಳೆಲ್ಲ ತೆಗೆದ್ಲು. ಅದರೊಳ್ಗೆ ಚಕ್ಕುಲಿ, ಕೋಡುಬಳೆ ಎಲ್ಲಾ ಇಟ್ಟು ಅಜ್ಜಿನ ಕೂರ್ಸಿ, "ಗುಡು ಗುಡು ಗುಮ್ಮಟವೇ ಓಡು, ಟರ್ರಾ ಪುರ್ರಾ" ಎಂದು ಕುಂಬ್ಳ ಕಾಯಿನ ದೂಕಿದ್ಲು.

ಅದು 'ಗುಡು ಗುಡು' ಉರ್ಳಿ ಹೋಯ್ತು. ಸಿಂಹ ಅಡ್ಡ ಹಾಕ್ತು. "ಕುಂಬಳಕಾಯಿ, ಕುಂಬಳ ಕಾಯಿ, ಅಜ್ಜಿನ ನೋಡ್ದ್ಯಾ?" ಎಂದು ಕೇಳ್ತು. ಅದಕ್ಕೆ ಕುಂಬಳ ಕಾಯೊಳಗಿನಿಂದ ಅಜ್ಜಿ, "ಅಜ್ಜಿನೂ ನೋಡ್ಲಿಲ್ಲ, ಪಿಜ್ಜಿನೂ ನೋಡ್ಲಿಲ್ಲ" ಅಂತ ಹೇಳಿ "ಗುಡು ಗುಡು ಗುಮ್ಮಟವೇ ಓಡು, ಟರ್ರಾ ಪುರ್ರಾ" ಎಂದಳು. ಕುಂಬಳಕಾಯಿ ಓಡಿತು.

ಕರಡಿ, ತೋಳಗಳಿಗೂ ಇದೇ ಉತ್ತರ ಹೇಳಿ ಮುಂದೆ ಹೋದಳು. ಹುಲಿಯೂ ಅಡ್ಡ ಹಾಕ್ತು. ಅದ್ಕೆ ಕುಂಬಳ ಕಾಯಲ್ಲಿ ಮುದ್ಕಿ ಇದೆ ಅಂತ ಗೊತ್ತಾಯ್ತು. ತನ್ನ ಕೈಯೆತ್ತಿ "ಫಟ್" ಅಂತ ಕುಂಬಳಕಾಯಿಗೆ ಹೊಡೀತು. ಕುಂಬಳಕಾಯಿ ಚೂರೆಲ್ಲ ಹುಲಿ ಕಣ್ಣಿಗೆ ಹಾರ್ತು. ಅದು ಕಣ್ಣು ತಿಕ್ಕಿಕೊಳ್ತಾ ಕೂತಾಗ ಅಜ್ಜಿ ಗಂಟು ಮೂಟೆ ಕಟ್ಕೊಂಡು ಮನೆಗೆ ಓಡಿದ್ಲು. ಆಮೇಲೆ ಸುಖವಾಗಿದ್ಲು.

—ಕೆ. ಎನ್. ಅಖಿಲಾ,
5ನೇ ತರಗತಿ, ಹರಿಹರಪುರ.
(ಕಥೆ ಕೇಳಿದ್ದು–ಫಣಿಯಮ್ಮನವರಿಂದ)

[ಈ ಬಾರಿ ಬಹಳ ಮಕ್ಕಳು ಜಾಣರಾಗುವ ಪ್ರಯತ್ನ ಮಾಡಿದ್ದಾರೆ. ಭೇಷ್! ಎಂ. ಎಸ್. ಸುಬ್ರಮಣ್ಯ, ಮೂತವಳ್ಳಿ (ಈತನ ತರಗತಿ ಅಥವಾ ವಯಸ್ಸು ನಮೂದಿಸಿಲ್ಲ) ಎಲ್ಲ ಪ್ರಶ್ನೆಗಳಿಗೂ ಸರಿಯುತ್ತರ ಕಳಿಸಿ ಬಹುಮಾನ ಪಡೆದಿದ್ದಾನೆ.

—ಸಂಪಾದಕ]

## ಮೋಸ ....

ಒಂದೂರಿನಲ್ಲಿ ರಾಮು, ಸೋಮು ಎಂದು ಇಬ್ಬರು ಗೆಳೆಯರಿದ್ದರು. "ನಾವಿಬ್ಬರೂ ಒಂದು ಅಂಗಡಿ ಹಾಕೋಣ ಅದರಲ್ಲಿ ಲಾಭ ಬಂದ ದುಡ್ಡನ್ನು ಹಂಚಿಕೊಂಡು ಸಂತೋಷದಿಂದ ಬಾಳೋಣ" ಎಂದು ರಾಮು ಸೋಮುಗೆ ಹೇಳಿದನು. ಅಂಗಡಿ ಹಾಕಿದರು.

ಹೀಗೆ ಇರುವಾಗ ಸೋಮುವು, ಈ ಅಂಗಡಿಯನ್ನು ನಾನೊಬ್ಬನೇ ಇಟ್ಟರೆ ಅಷ್ಟು ದುಡ್ಡೂ ನನಗೊಬ್ಬನಿಗೇ ಸಿಗಬಹುದೆಂದು ಯೋಚಿಸಿದನು. ಹೇಗಾದರೂ ಮಾಡಿ ರಾಮುಗೆ ಮೋಸ ಮಾಡಬೇಕೆಂದು ನಿರ್ಧರಿಸಿದನು.

ಒಂದು ದಿನ ರಾಮು ತನ್ನ ನೆಂಟರ ಮನೆಯ ಮದುವೆಗೆ ಹೋಗಿ ಬರುತ್ತೇನೆಂದು ಸೋಮುವಿಗೆ ಹೇಳಿ ಹೊರಟನು. ಆಗ ಸೋಮುವಿಗೆ ಸಂತೋಷವಾಯಿತು. ಇದೇ ಒಳ್ಳೆಯ ಸಮಯವೆಂದು ಮನಸ್ಸಿನಲ್ಲಿ ಅಂದುಕೊಂಡನು. ರಾತ್ರಿಯಲ್ಲಿ ಬೇಗ ಬೇಗನೆ ಅಂಗಡಿಯಲ್ಲಿದ್ದ ಸಾಮಾನುಗಳನ್ನು ಬೇರೆ ಕಡೆಗೆ ಸಾ[illegible]ನು.

ವ[illegible]ನು ವಾಪಸು ಬಂದಾಗ ಸೋಮ[illegible]ಯೊಳಗೆ ಬಾಯಿಗೆ ಬಟ್ಟೆಯನ್ನು ತುಂಬಿಕೊಂಡು, ನೀಡಿ ಮಲಗಿದ್ದನು. ಅದನ್ನು ನೋಡಿ ರಾಮು ಹೆದರಿ ಚೀರಿಕೊಂಡು, "ಏನಾಯಿತು ಸೋಮು?" ಎಂದು ಕೇಳಿದನು.

ಆಗ ಸೋಮು, "ಕಳ್ಳರು ಬಂದು ನನ್ನನ್ನು ಹೊಡೆದು ಅಂಗಡಿಯಲ್ಲಿದ್ದ ಸಾಮಾನುಗಳನ್ನೆಲ್ಲಾ ತೆಗೆದುಕೊಂಡು ಹೋದರು" ಎಂದು ಹೇಳಿದನು. ಇದನ್ನು ಕೇಳಿ, "ಅಯ್ಯೋ ಮುಂದೇನು ಗತಿ!" ಎಂದು ರಾಮು ಯೋಚನೆಗೀಡಾದನು.

**ಎಚ್. ವಿ. ಬಿಂದುಮಾಲಿನಿ**
5ನೇ ತರಗತಿ
ಹೆಲಸಗೋಡು

ಪ್ರೀತಿಯ ಮಕ್ಕಳೆ,

ನಿಮಗೆ ಸ್ಪರ್ಧೆ ಎಂದರೆ ಇಷ್ಟ ಅಲ್ಲವೆ? ಹಾಗಾದರೆ ಈ ಕಥೆಯ ಕೊನೆ ಹೇಗಾಗುತ್ತದೆಂದು ನಿಮ್ಮ ಮನಸ್ಸಿಗೆ ಹೊಳೆದುದನ್ನು ಬರೆದು ಈ ಕಥೆಯನ್ನು ಪೂರ್ಣ ಮಾಡಿ ಕಳಿಸಿ.

ಕಥೆ ಒಂದು ಎಕ್ಸರ್‌ಸೈಜ್ ಪುಟಕ್ಕಿಂತ ಹೆಚ್ಚಿರಬಾರದು. ನೀವೇ ಯೋಚಿಸಿ ಬರೆಯಬೇಕು. ನಿಮ್ಮ ತರಗತಿ ಅಥವಾ ವಯಸ್ಸು ಬರೆಯಬೇಕು. 12 ವರ್ಷದೊಳಗಿನವರು ಮಾತ್ರ ಸ್ಪರ್ಧಿಸಬಹುದು

ಉತ್ತಮವಾದ 2 ಕಲ್ಪನೆಗಳಿಗೆ ಬಹುಮಾನ ಕೊಟ್ಟು ಪ್ರಕಟಿಸುತ್ತೇವೆ. ನಿಮ್ಮ ಕಥೆ 20. 9. 87 ರೊಳಗೆ ನಮಗೆ ತಲುಪಬೇಕು.

—ಸಂಪಾದಕ

# ಏಲಕ್ಕಿ ಬೆಳೆಯಲ್ಲಿ ಕೀಟ ನಿರ್ವಹಣೆ

ಮಲೆನಾಡಿನ ವಲಯದಲ್ಲಿ ಏಲಕ್ಕಿ ಒಂದು ಮುಖ್ಯವಾದ ಬೆಳೆ. ಇದನ್ನು ಸುಮಾರು 28,322 ಹೆಕ್ಟೇರ್ ಪ್ರದೇಶದಲ್ಲಿ ಬೆಳೆಯಲಾಗುತ್ತಿದ್ದರೂ ಉತ್ಪಾದನೆಯಲ್ಲಿ ಇತ್ತೀಚೆಗೆ ಸಾಕಷ್ಟು ಸಮಸ್ಯೆಗಳು ಕಂಡುಬರುತ್ತಿವೆ. ಸಕಾಲದಲ್ಲಿ ಮಳೆ ಬೀಳದೆ ತೋಟಗಳಲ್ಲಿ ಗಿಡಗಳು ಒಣಗುವುದು ಹಾಗೂ ಕಟ್ಟೆ ರೋಗ ಮತ್ತು ಕೀಟಗಳ ಹಾವಳಿಯಿಂದ ಗಣನೀಯ ಪ್ರಮಾಣದ ನಷ್ಟ ಉಂಟಾಗುತ್ತಿದೆ.

ಏಲಕ್ಕಿ ಬೆಳೆಗೆ ಸುಮಾರು 72 ಬಗೆಯ ಕೀಟಗಳು ಹಾನಿಯುಂಟುಮಾಡುತ್ತಿದ್ದು, ಅವುಗಳಲ್ಲಿ ಥ್ರಿಪ್ಸ್ (ಟೆನಿಯೋಡ್ರಿಪ್ಸ್ ಕಾರ್ಡಮೊಮ್ಮೈ), ಕಾಯಿ ಮತ್ತು ಕಾಂಡ ಕೊರೆಯುವ ಹುಳ (ಡಿಕೊಕ್ರೊಸಿಸ್ ಪಂಕ್ತಿಫೆರಾಲಿಸ್), ಕಾಯಿ ಕೊರೆಯುವ ಹುಳ (ಫೀಸಿಲಿಪ್ಸ್ ಕಾರ್ಡಮೊಮ್ಮೈ) ಹಾಗೂ ಜಮ್ಮೈಡ್ಸ್ ಗುಂಪಿಗೆ ಸೇರಿದ ಕಾಯಿ ಕೊರೆಯುವ ಕೀಟಗಳು ಹೆಚ್ಚು ಹಾನಿಯನ್ನುಂಟು ಮಾಡುತ್ತವೆ.

**ಕೀಟಗಳಿಂದ ಉಂಟಾಗುವ ಹಾನಿ**

ಥ್ರಿಪ್ಸ್ ಕೀಟಗಳು ಗರಿಗಳ ಮಡಿಕೆಯ ಕೆಳಗೆ, ಕೃತಕ ಕಾಂಡದ ಮಧ್ಯೆ ಮತ್ತು ಹೂವಿನ ಒಳಭಾಗದಲ್ಲಿ ಅವಿತುಕೊಂಡು ಎಳಸಾದ ಕಾಯಿಗಳ ಮೇಲೆ ಗಾಯ ಮಾಡುತ್ತವೆ ಮತ್ತು ಅವುಗಳ ರಸವನ್ನು ಹೀರುತ್ತವೆ. ಈರೀತಿ ಥ್ರಿಪ್ಸ್ ಕೀಟಗಳ ಧಾಳಿಗೆ ತುತ್ತಾದ ಹೂಗೊಂಚಲುಗಳ ಬೆಳವಣಿಗೆ ಕುಂಠಿತಗೊಂಡು, ಹೂವು ಮತ್ತು ಕಾಯಿಗಳು ಉದುರಿ ಬೀಳುತ್ತವೆ. ಬೀಜ ಕೋಶಗಳ ಮೇಲೆ ಬಿರುಕುಗಳು ಉಂಟಾಗುತ್ತವೆ ಮತ್ತು ಉತ್ಪಾದನೆಯ ಪ್ರಮಾಣ ಬಹಳ ಕಡಿಮೆಯಾಗುತ್ತದೆ. ಹೆಚ್ಚು ಉಷ್ಣಾಂಶ ಮತ್ತು ಕಡಿಮೆ ತೇವಾಂಶದಲ್ಲಿ ಕೀಟದ ಬೆಳವಣಿಗೆ ದ್ವಿಗುಣಗೊಳ್ಳುವುದರಿಂದ ಡಿಸೆಂಬರ್‌ನಿಂದ ಮೇ ತಿಂಗಳ ಬೇಸಿಗೆ ಅವಧಿಯಲ್ಲಿ ಈ ಕೀಟಗಳ ಸಂಖ್ಯೆ ಗರಿಷ್ಠ ಪ್ರಮಾಣದಲ್ಲಿರುತ್ತದೆ.

ಕಾಯಿ ಮತ್ತು ಕಾಂಡ ಕೊರೆಯುವ ಕೀಟಗಳು ಹೂ ಗೊಂಚಲುಗಳು, ಹೂಮೊಗ್ಗು, ಕಾಂಡ ಹಾಗೂ ಅಪಕ್ವ ಬೀಜ ಕೋಶಗಳನ್ನು ಕೊರೆಯುತ್ತವೆ. ಈ ಕೀಟಗಳ ಹಾವಳಿಗೆ ತುತ್ತಾದ ಕಾಯಿಗಳು ಜೊಳ್ಳಾಗಿ, ಮಳೆಗಾಲದಲ್ಲಿ ಕೊಳೆತು ಬಿದ್ದು ಹೋಗುತ್ತವೆ. ಜೂನ್ ತಿಂಗಳಿನಿಂದ ಅಕ್ಟೋಬರ್ ತಿಂಗಳವರೆಗೆ ಈ ಕೀಟಗಳ ಹಾವಳಿ ಕಂಡುಬರುತ್ತದೆ.

**ನಿರ್ವಹಣೆ**

ಈ ಕೀಟಗಳ ಹಾವಳಿಯಿಂದ ಉಂಟಾಗುವ ನಷ್ಟವನ್ನು ನಿಯಂತ್ರಿಸಲು ಕೆಲವು ಏಲಕ್ಕಿ ಬೆಳೆಗಾರರು ಸಾಮಾನ್ಯವಾಗಿ 5 ರಿಂದ 6 ಸಲ ಕೀಟ ನಾಶಕಗಳ ಸಿಂಪರಣೆ ಮಾಡುವ ಪದ್ಧತಿಯನ್ನು ಅನುಸರಿಸುತ್ತಿದ್ದಾರೆ. ಆದರೆ ಆರ್ಥಿಕವಾಗಿ ಹೆಚ್ಚು ನಷ್ಟವಾಗದಂತೆ ಕೀಟಗಳನ್ನು ನಿರ್ವಹಣೆ ಮಾಡಲು ಎರಡು ಬಾರಿ ಕೀಟನಾಶಕಗಳ ಸಿಂಪರಣೆಯಿಂದ ಸಾಧ್ಯ ಎಂಬುದನ್ನು ಮೂಡಿಗೆರೆ ಸಂಶೋಧನಾ ಕೇಂದ್ರದ ಫಲಿತಾಂಶಗಳು ಸ್ಪಷ್ಟಪಡಿಸಿವೆ.

ಮೊದಲನೆಯದಾಗಿ ಏಲಕ್ಕಿ ಕಾಯಿಗಳನ್ನು ಕಟಾವು ಮಾಡುವಾಗ ಬುಡದ ಸ್ವಚ್ಛತೆ ಮಾಡಿ, ಒಣಗಿದ ಎಲೆಗಳು ಮತ್ತು ಕಂದುಗಳನ್ನು ತೆಗೆಯುವುದರಿಂದ ಮೂರನೇ ಒಂದು ಭಾಗದಷ್ಟು ಥ್ರಿಪ್ಸ್ ಕೀಟಗಳ ಸಂಖ್ಯೆಯನ್ನು ಕಡಿಮೆ ಮಾಡಬಹುದು. ಏಲಕ್ಕಿ ಕಂದುಗಳ ಬುಡದಿಂದ ಹೂಗೊಂಚಲುಗಳು ಹೊರಬಂದು, ಒಂದು ಅಥವಾ ಎರಡು ಹೂ ಮೊಗ್ಗುಗಳು ಕಾಣಿಸಿಕೊಂಡಾಗ (ಜೂನ್, ಜುಲೈ) ಮೊದಲನೇ ಸಿಂಪರಣೆಯನ್ನು 12.5 ಮಿ. ಲೀ. ಮಾನೋಕ್ರೋಟೋಫಾಸ್ (ನುವಕ್ರಾನ್) 40% ಇ.ಸಿ. ಕೀಟನಾಶಕವನ್ನು 10 ಲೀಟರ್ ನೀರಿನಲ್ಲಿ ಬೆರೆಸಿ ಸಿಂಪರಣೆ ಮಾಡುವುದರಿಂದ ಕಾಯಿ ಹಾಗೂ ಕಾಂಡ ಕೊರೆಯುವ ಹುಳುಗಳ ಮತ್ತು ಥ್ರಿಪ್ಸ್ ಕೀಟದ ಹಾವಳಿಯನ್ನು ತಡೆಗಟ್ಟಬಹುದು. ಥ್ರಿಪ್ಸ್ ಕೀಟಗಳು ಐದೂವರೆ ಅಡಿ ಎತ್ತರದವರೆಗೂ ಗುಂಪಾಗಿ ಸೇರಿಕೊಂಡು ಬೆಳೆಗೆ ಹಾನಿಯುಂಟು ಮಾಡುವುದರಿಂದ ಎಕರೆಗೆ ಸುಮಾರು 250 ಲೀಟರ್ ಸಿಂಪರಣಾ ದ್ರಾವಣ ಉಪಯೋಗಿಸಿ ಗಿಡಗಳು ಚೆನ್ನಾಗಿ ನೆನೆಯುವಂತೆ ಐದೂವರೆ ಅಡಿ ಎತ್ತರದವರೆಗೂ ಸಿಂಪರಣೆ ಮಾಡಿದರೆ ಥ್ರಿಪ್ಸ್ ಕೀಟದ ಹಾವಳಿ ತಡೆಗಟ್ಟಲು ಸಾಧ್ಯವಾಗುತ್ತದೆ.

ಎರಡನೇ ಸಿಂಪರಣೆಯನ್ನು 35 ರಿಂದ 40 ದಿನಗಳ ನಂತರ (ಆಗಸ್ಟ್‌ನಲ್ಲಿ) 20 ಮಿ. ಲೀ. ಕ್ವಿನಾಲ್ ಫಾಸ್ (ಎಕಾಲಕ್ಸ್) 25% ಇ. ಸಿ. ಕೀಟನಾಶಕವನ್ನು 10 ಲೀಟರ್ ನೀರಿನಲ್ಲಿ ಬೆರೆಸಿ ಸಿಂಪರಣೆ ಮಾಡಬಹುದು. ತೋಟಗಳಲ್ಲಿ ಜೇನು ಹುಳುಗಳ ಚಟುವಟಿಕೆ ಜಾಸ್ತಿ ಇದ್ದಲ್ಲಿ ಎರಡನೇ ಸಿಂಪರಣೆಯನ್ನು ಕ್ವಿನಾಲ್‌ಫಾಸ್ ಕೀಟನಾಶಕದ ಬದಲಾಗಿ 20 ಮಿ.ಲೀ. ಫೊಸಲೋನ್ (ಜೋಲೋನ್) 35% ಇ.ಸಿ. ಕೀಟನಾಶಕವನ್ನು 10 ಲೀಟರ್ ನೀರಿನಲ್ಲಿ ಬೆರೆಸಿ ಸಿಂಪರಣೆ ಮಾಡುವುದು ಒಳ್ಳೆಯದು. ಫೊಸಲೋನ್ ಕೀಟನಾಶಕ ಜೇನುಹುಳುಗಳಿಗೆ ಮತ್ತು ಪರಾಗಸ್ಪರ್ಶ ಮಾಡುವ ಕೀಟಗಳಿಗೆ ವಿಷಕಾರಿಯಲ್ಲ. ಮಳೆ ಇಲ್ಲದ ವೇಳೆಯಲ್ಲಿ ಸಾಯಂಕಾಲದ ಸಮಯದಲ್ಲಿ ಸಿಂಪರಣೆ ಮಾಡುವುದರಿಂದ ಜೇನುಹುಳುಗಳ ಚಟುವಟಿಕೆಗೆ ತೊಂದರೆ ಆಗುವುದನ್ನು ನಿವಾರಿಸಲು ಸಾಧ್ಯವಾಗುತ್ತದೆ.

ಕಾಯಿ ಮತ್ತು ಕಾಂಡ ಕೊರೆಯುವ ಹುಳದ ಹಾವಳಿ ಶೇಕಡ 10ಕ್ಕಿಂತ ಕಡಿಮೆ ಇದ್ದಲ್ಲಿ, ಹಾನಿಗೊಳಗಾದ ಗಿಡಗಳಿಗೆ ಮಾತ್ರ ಕೀಟನಾಶಕಗಳನ್ನು ಸಿಂಪರಣೆ ಮಾಡುವುದು ಸೂಕ್ತ. ಮೊದಲನೇ ಸಿಂಪರಣೆಗೆ ಮತ್ತು ಎರಡನೇ ಸಿಂಪರಣೆಗೆ ಕೀಟ

(4ನೇ ಪುಟಕ್ಕೆ)

## ಸರ್ಕಾರಿ ಕಚೇರಿಯಲ್ಲಿ ಉಗುಳಿದರೆ, 'ದಂ' ಎಳೆದರೆ ದಂಡ

ಸರಕಾರಿ, ಅರೆ-ಸರಕಾರಿ, ಜಿಲ್ಲಾ ಪರಿಷತ್, ಮುನಿಸಿಪಲ್ ಕೌನ್ಸಿಲ್ ಮತ್ತು ಮಹಾನಗರಪಾಲಿಕೆಗಳ ಕಚೇರಿಗಳಲ್ಲಿ ಧೂಮಪಾನ ಮಾಡುವುದನ್ನು ಮತ್ತು ಉಗುಳುವುದನ್ನು ಮಹಾರಾಷ್ಟ್ರ ಸರಕಾರ ತಕ್ಷಣದಿಂದ ಜಾರಿಯಾಗುವಂತೆ ನಿಷೇಧಿಸಿದೆ.

ಮುಂಬೈ ಪೋಲೀಸ್ ಕಾಯ್ದೆಯನ್ವಯ ಈ ನಿಷೇಧವನ್ನು ಪ್ರಕಟಿಸಲಾಗಿದ್ದು, ಈ ನಿಯಮವನ್ನು ಉಲ್ಲಂಘಿಸುವ ಯಾರಿಗೇ ಆಗಲಿ 100 ರೂ. ದಂಡ ವಿಧಿಸುವ ಅಧಿಕಾರವನ್ನು, ನಿಯಮವನ್ನು ಜಾರಿ ಮಾಡುವ ಅಧಿಕಾರಿಗಳಿಗೆ ನೀಡಲಾಗಿದೆ

"ಪ್ರತಿ ಸಭಾಂಗಣ ಮತ್ತು ಚೇಂಬರ್‌ಗಳ ಪ್ರವೇಶ ದ್ವಾರದಲ್ಲೇ 'ಧೂಮಪಾನ ಮತ್ತು ಉಗುಳುವಿಕೆಯನ್ನು ಕಡ್ಡಾಯವಾಗಿ ನಿಷೇಧಿಸಲಾಗಿದೆ' ಎಂಬ ಫಲಕಗಳನ್ನು ಹಾಕಬೇಕು. ಕಚೇರಿಗಳಲ್ಲಿ ಆ್ಯಶ್-ಟ್ರೇಗಳನ್ನು ಇಡಬಾರದು ಮತ್ತು ಕಚೇರಿಗಳ ಸಂಕೀರ್ಣದಲ್ಲಿರುವ ಎಲ್ಲಾ ಬೀಡಾ-ಬೀಡಿ ಅಂಗಡಿಗಳನ್ನು ಎತ್ತಂಗಡಿ ಮಾಡಬೇಕು" ಎಂದು ಸರಕಾರ ಎಲ್ಲಾ ಕಚೇರಿಗಳಿಗೆ ನಿರ್ದೇಶನ ನೀಡಿದೆ.

# ಆಕಾಶವಾಣಿ ವಿಶೇಷ ಕಾರ್ಯಕ್ರಮಗಳು

**ರೈತರಿಗಾಗಿ**

ಚಿಕ್ಕಮಗಳೂರು, ಶಿವಮೊಗ್ಗ, ಚಿತ್ರದುರ್ಗ ಜಿಲ್ಲೆಗಳ ರೈತರ ಉಪಯೋಗಕ್ಕಾಗಿ ಭದ್ರಾವತಿ ಆಕಾಶವಾಣಿಯು ಇನ್ನು ಮುಂದೆ ಪ್ರತಿ ಭಾನುವಾರ ಸಂಜೆ 6.50ರಿಂದ 7-35ರವರೆಗೆ ಪ್ರತ್ಯೇಕ 'ಕೃಷಿರಂಗ' ಕಾರ್ಯಕ್ರಮವನ್ನು ಸ್ವತಂತ್ರವಾಗಿ ಬಿತ್ತರಿಸಲಿದೆ.

**ವಿದ್ಯಾರ್ಥಿಗಳಿಗಾಗಿ**

'ಯುವವಾಣಿ' ಕಾರ್ಯಕ್ರಮದ ಅಂಗವಾಗಿ 'ಉದ್ಯೋಗ ವಿಚಾರ ವಿನಿಮಯ' ಎಂಬ ಹೊಸ ಸಾಪ್ತಾಹಿಕ ಕಾರ್ಯಕ್ರಮವೊಂದನ್ನು ಮಂಗಳೂರು ಆಕಾಶವಾಣಿ ಆರಂಭಿಸಿದೆ. ಪ್ರತೀ ಶುಕ್ರವಾರ ರಾತ್ರಿ 8.10 ರಿಂದ ಪ್ರಸಾರವಾಗುವ ಈ ಕಾರ್ಯಕ್ರಮದಲ್ಲಿ ಆಯಾ ವಾರದ ಉದ್ಯೋಗ ವಾರ್ತೆಯೊಂದಿಗೆ ವಿವಿಧ ಸ್ಪರ್ಧಾತ್ಮಕ ಪರೀಕ್ಷೆಗಳು, ತಾಂತ್ರಿಕ ತರಬೇತಿಗಳು, ಸ್ವ-ಉದ್ಯೋಗಗಳು, ಸಾಲ-ಸೌಲಭ್ಯಗಳು ಮುಂತಾದ ವಿಚಾರಗಳ ಕುರಿತು ಮಾಹಿತಿ-ಮಾರ್ಗದರ್ಶನ ನೀಡಿ, ಮುಖ್ಯವಾಗಿ ಗ್ರಾಮೀಣ ಯುವಜನರಿಗೆ ಉದ್ಯೋಗಾನ್ವೇಷಣೆಗೆ ಸಹಾಯಕವಾಗುವಂತೆ ರೂಪಿಸಲಾಗಿದೆ.

ಅಲ್ಲದೆ, ಎಸ್‌ಎಸ್‌ಸಿ ಮತ್ತು ರೇಲ್ವೆ ಕ್ಲರಿಕಲ್ ಗ್ರೇಡ್ ಪರೀಕ್ಷೆಗೆ ಕೂರಬಯಸುವ ಅಭ್ಯರ್ಥಿಗಳಿಗೆ ಮಾರ್ಗದರ್ಶಿಯಾಗುವಂಥ 4 ಭಾಷಣಗಳನ್ನು ಪರಿಣತರಿಂದ ತಾ. 28.8 1987ರಿಂದ ಪ್ರತಿ ಶುಕ್ರವಾರ ಈ ಕಾರ್ಯಕ್ರಮದಲ್ಲಿ ಪ್ರಸಾರ ಮಾಡಲಾಗುತ್ತಿದೆ

## 'ಸ್ವಚ್ಛ' ಸಾಮಾಜಿಕ ಪ್ರಜ್ಞೆ : ಇಲ್ಲೊಂದು ಮಾದರಿ

ಬಂಡಿಗಡಿಯಿಂದ ಕಮ್ಮರಡಿ ಕಡೆಗೆ ಎರಡೂವರೆ ಕಿ. ಮೀ. ದೂರದ ಮಲ್ಲಿಗೆ ಮನೆ ಎಂಬಲ್ಲಿ ಒಂದು ಬಸ್ ತಂಗುದಾಣವಿದೆ ಇದನ್ನು ಕಟ್ಟಿ 5 ವರ್ಷವಾಗಿದೆ. ಇಂದಿಗೂ ಸ್ವಚ್ಛ, ಶುಭ್ರವಾಗಿರುವ ಈ ಕಟ್ಟಡ 'ಮಲ್ಲಿಗೆ ಮನೆ' ಎಂಬ ಹೆಸರಿಗೆ ತಕ್ಕುದಾಗಿ ಕಾಣುತ್ತದೆ.

ಈ ಸ್ವಚ್ಛತೆಯ ಹಿಂದಿರುವುದು ಅಷ್ಟೇ ಸ್ವಚ್ಛವಾದ ಸಾಮಾಜಿಕ ಪ್ರಜ್ಞೆಗೊಂದು ಮಾದರಿ ಎನ್ನಿಸುವ ಒಂದು ವೃದ್ಧ(ರ) ಚೇತನ. ಮಲ್ಲಿಗೆಮನೆ ಪುಟ್ಟೇನಾಯ್ಕ ಎಂಬ ವೃದ್ಧ ರೈತ ಪ್ರತಿ ದಿನ ಬಂದು ಇದನ್ನು ಗುಡಿಸಿ, ಸ್ವಚ್ಛಗೊಳಿಸುತ್ತಾರೆ. ಮಕ್ಕಳು ಗೋಡೆ-ಗೀಡೆ ಮೇಲೆ ಗೀಚಿದರೆ ಅದಕ್ಕೆ ಸುಣ್ಣ ಬಳಿದು ಅಳಿಸುತ್ತಾರೆ.

ಅಷ್ಟೇ ಅಲ್ಲ, ಅದು ಯಾರೆಂದು ಕಂಡು ಹಿಡಿದು, ಅವರನ್ನು ತರಾಟೆಗೆ ತೆಗೆದುಕೊಂಡು, ಮತ್ತೆ ಬುದ್ಧಿವಾದ ಹೇಳುತ್ತಾರೆ !

ಎಲ್ಲ ಊರಲ್ಲೂ ಇಂಥ ಸಾಮಾಜಿಕ ಪ್ರಜ್ಞೆಯುಳ್ಳ ಒಂದಷ್ಟು ಜನ ಇರುವುದಾದರೆ ? ಭ್ರಮೆ ಅಂತೀರಾ !?

(ಬರಹ : 'ಡಾ॥ ಸಂಹಾರ್')

# ಮೂಢ ನಂಬಿಕೆ

(2ನೇ ಪುಟದಿಂದ)

ನ್ನು ತಾವು ಮಾತ್ರ ಸವಿಯುತ್ತ, ತಮ್ಮ ಅನುಯಾಯಿಗಳಾದ ಅಸಂಖ್ಯ ಜನತೆ ಆ ವಿಜ್ಞಾನದ ದೃಷ್ಟಿಯನ್ನು– ವಿಚಾರ ಮಾಡಿ ನಡೆಯುವುದನ್ನು – ರೂಢಿಸಿಕೊಳ್ಳದಂತೆ ಈ ಮಂದಿ ಬಹಳ ಉಪಾಯವಾಗಿ ನೋಡಿಕೊಳ್ಳುತ್ತಾರೆ ಆ ಮೂಲಕ ಆ ಅಸಂಖ್ಯ ಜನ ಸಮುದಾಯವನ್ನು ಅಜ್ಞಾನದ ಕತ್ತಲೆಯಲ್ಲಿಟ್ಟು, ಅವರನ್ನು ಅಪರಿಮಿತವಾದ ಮಾನಸಿಕ, ದೈಹಿಕ ಹಿಂಸೆಗೆ ಗುರಿ ಮಾಡುತ್ತಾರೆ. ಇದರಿಂದಾಗಿ, ಜನ ಸಮುದಾಯದ ಅಜ್ಞಾನವನ್ನೇ ಆಯುಧ ಮಾಡಿಕೊಂಡಿರುವ ಶೋಷಕ ವರ್ಗಗಳಿಗೆ ತಾವು ಅನನ್ಯವಾದ ಸೇವೆ ಸಲ್ಲಿಸುತ್ತಾರೆ

ಆದರೆ ಇದನ್ನು ಜನತೆಗೆ ಬಯಲು ಮಾಡುವವರು 'ರಾಕ್ಷಸ'ರಾಗುತ್ತಾರೆ ! ನಿಜವಾಗಿಯೂ ಇಂಥ ರಾಕ್ಷಸರು ಎಷ್ಟು ಒಳ್ಳೆಯವರು ! ಅಲ್ಲವೆ? ಉದಾಹರಣೆಗೆ ಈ ಪತ್ರದಲ್ಲಿ ಪ್ರಸ್ತಾಪವಾದ ದಲಿತ ಸಂಘರ್ಷ ಸಮಿತಿಯ ಕಾರ್ಯಕರ್ತರಂತೆ.

ನಮ್ಮ-ನಿಮ್ಮ ಮಕ್ಕಳನ್ನೆಲ್ಲ ಹೀಗೆ ಕ್ರೂರವಾಗಿ ನರಳಿಸಿ ತಮ್ಮ 'ದೈವಭಕ್ತಿ', 'ಆಸ್ತಿಕತೆ', 'ಧರ್ಮ'ಗಳಿಗೆ ಬಲಿ ಕೊಡಬೇಕೆಂದು ಬೋಧಿಸುವ, ಈ ರಕ್ತದಾಹಿಗಳಿಗೆ—ಓದುಗರೆ. ನಿಮ್ಮಲ್ಲಿ ಕ್ಷಮೆ ಇದೆಯೆ ?

ಹೋಗಲಿ, ಈಗಲಾದರೂ 'ಮೂಢ ನಂಬಿಕೆ', 'ಅಜ್ಞಾನ'ಗಳೆಂದರೇನೆಂದು ಅರ್ಥವಾಗುತ್ತಿಲ್ಲವೆ ? ಹಾಗಿದ್ದರೆ ಅದನ್ನು ತೊಡೆಯಲು ನೀವೂ, ನಾವೂ—ಮನುಷ್ಯರಾಗಿದ್ದರೆ—ನಮ್ಮಿಂದಾದಷ್ಟು ಶ್ರಮಿಸಬೇಕಲ್ಲವೆ ?

—ಸಂಪಾದಕ.

# "ಡಾ|| ಮಹದೇವಪ್ಪ .... ಬೇಕೇ ಬೇಕು"

(ವರದಿ : ಎಂ. ಐ. ಶ್ರೀನಿವಾಸಮೂರ್ತಿ)

ನ.ರಾ.ಪುರ: "ಡಾ|| ಮಹದೇವಪ್ಪ ಬೇಕೇ ಬೇಕು...." ಇದು ಯಾವುದೋ ಚುನಾವಣೆಯ ಘೋಷಣೆಯದಲ್ಲ. ಇಲ್ಲಿನ ವೈದ್ಯಾಧಿಕಾರಿ ಡಾ|| ಟಿ. ಎಂ. ಮಹದೇವಪ್ಪನವರ ಮೇಲಿನ ಆರೋಪಗಳ ಬಗ್ಗೆ ತರೀಕೆರೆಯ ಜಿಲ್ಲಾ ಸಹಾಯಕ ಆರೋಗ್ಯಾಧಿಕಾರಿಗಳು ಆ. 18 ರಂದು ವಿಚಾರಣೆ ನಡೆಸಿದ ಸಂದರ್ಭದಲ್ಲಿ ಸಾವಿರಾರು ಜನರ ಕೂಗಿನ ಸ್ಪಂದನ ಇದಾಗಿತ್ತು.

ಇದೇ ಮಾರ್ಚ್ ತಿಂಗಳಲ್ಲಿ ಆರೋಗ್ಯ ಇಲಾಖೆಯ ಮೈಸೂರು ವಿಭಾಗೀಯ ಉಪನಿರ್ದೇಶಕರು ವಿಚಾರಣೆ ನಡೆಸಿ ಮುಗಿಸಿರುವ ಅದೇ ಹಳಸಲು ಆಪಾದನೆಗಳು; ಆಪಾದನೆ ಮಾಡಿದ ಅದೇ ಹಳೇ ವ್ಯಕ್ತಿಗಳು– ಇದು ವಿಚಾರಣೆ ಹಿನ್ನೆಲೆಯ ಸಾರಾಂಶ.

ಆಪಾದನೆಯಲ್ಲಿ ಬಳಸಲಾದ ಪ್ರಮುಖರು: ಶ್ರೀಮತಿ ವನಮಾಲಮ್ಮ, ದೇವೇಂದ್ರಪ್ಪ, ಎಚ್. ಚಂದ್ರಯ್ಯಗೌಡ, ಮೊದಲಾದ ಏಳೆಂಟು ಮಂದಿ. ಇವರಲ್ಲಿ ಅನೇಕರು ರಾಜ್ಯದ ಮಂತ್ರಿಗಳಿಗೂ ಸಂಬಂಧಪಟ್ಟ ಅಧಿಕಾರಿಗಳಿಗೂ ಅರ್ಜಿ ಸಲ್ಲಿಸಿದ್ದರ ಮೇರೆಗೆ ಪುನಃ ಈ ವಿಚಾರಣೆ ನಡೆಯಿತು.

ಆಸ್ಪತ್ರೆಯ ಹೊರಾವರಣದಲ್ಲಿ ಸಾವಿರಾರು ಮಂದಿ ಸೇರಿದ್ದು ಇವರೆಲ್ಲಾ, "ಡಾ|| ಮಹದೇವಪ್ಪನವರ ಮೇಲಿನ ಆಪಾದನೆ ಕೈಬಿಡಿ", "ಡಾ|| ಮಹದೇವಪ್ಪ ಬೇಕೇ ಬೇಕು" ಮುಂತಾಗಿ ಈ ವೈದ್ಯರ ಪರ ಘೋಷಣೆ ಕೂಗಿ, "ಇವರನ್ನು ಯಾವುದೇ ಕಾರಣಕ್ಕೂ ಎತ್ತಂಗಡಿ ಮಾಡಬಾರದು" ಎನ್ನುವ ಸಾರ್ವಜನಿಕರ ಅಹವಾಲು ಅರ್ಜಿಯನ್ನು ವಿಚಾರಣಾಧಿಕಾರಿಗಳಿಗೆ ಸಲ್ಲಿಸಿದರು.

**ಗಣ್ಯರ ವಿರೋಧ**

ಡಾ|| ಮಹಾದೇವಪ್ಪನವರ ವಿರುದ್ಧ ಯಾವುದೇ ಕ್ರಮ ತೆಗೆದುಕೊಳ್ಳುವುದನ್ನಾಗಲಿ, ಅವರ ವರ್ಗಾವಣೆ ಮಾಡುವುದನ್ನಾಗಲಿ, ಅನೇಕ ಗಣ್ಯರು ವಿರೋಧಿಸಿದ್ದಾರೆ. ಮಾಜಿ ವಿಧಾನ ಪರಿಷತ್ ಸದಸ್ಯ ಎ. ಪಿ. ಗೋವಿಂದೇಗೌಡ, ವಕೀಲ್ ಶೇಷಾದ್ರಿ, ಕಾಂಗ್ರೆಸ್ ಮುಖಂಡ ಅಬ್ದುಸ್ ಸಮದ್ ಸಾಬ್, ವೃದ್ಧ ವಾಸುದೇವೇಗೌಡರು ಮುಂತಾದ ಅನೇಕ ಗಣ್ಯರು ತಮ್ಮ ಅಭಿಪ್ರಾಯ ವ್ಯಕ್ತಪಡಿಸುತ್ತಾ, ಇವರು ಉತ್ತಮ ವೈದ್ಯರೆಂದು ಸಾರ್ವಜನಿಕರಲ್ಲಿ ಒಳ್ಳೆಯ ವಿಶ್ವಾಸಗಳಿಸಿದ್ದಾರೆ, ಜಾತಿ-ಮತಗಳ ಭೇದವಿಲ್ಲ, ಬಡವ–ಶ್ರೀಮಂತ, ಮೇಲು–ಕೀಳು ಮುಂತಾದ ತಾರತಮ್ಯವಿಲ್ಲ; ನಾವು ಹಿಂದೆ ನೋಡಿರದ ಎಷ್ಟೋ ಔಷಧಿ-ಮಾತ್ರೆಗಳು ಈಗ ಇವರು ಬಂದ ಮೇಲೆ ಆಸ್ಪತ್ರೆಯಲ್ಲೇ ದೊರೆಯುತ್ತಿವೆ; ಬೇರೆಷ್ಟೋ ಜನ ಬಾಗಿಲು ಮುಚ್ಚುವುದಕ್ಕೆ ಸಮಯ ಆಗುವುನ್ನೇ ಕಾಯುವವರಾದರೆ ಇವರು ಮಧ್ಯಾಹ್ನ 3 ಗಂಟೆ ಆದ್ರೂ ಊಟಕ್ಕೂ ಹೋಗದೆ ಡ್ಯೂಟಿ ಮಾಡ್ತಾರೆ; ಹೀಗೆ ಸಾವಿರಾರು ಜನಕ್ಕೆ ಬೇಕಾದವರನ್ನು ಕೇವಲ ಏಳೆಂಟು ಜನರ ದುರುದ್ದೇಶದ ಮಾತು ಕೇಳಿಕೊಂಡು ತೆಗೆಯೋದುಂಟಾ....? ಮುಂತಾಗಿ ಹೇಳುತ್ತಾರೆ.

ಜಾತಿ-ಮತ–ಪಕ್ಷ, ಬಡವ–ಬಲ್ಲಿದ ಎಂಬ ಭೇದವಿಲ್ಲದೆ ಎಲ್ಲಾ ಸ್ತರಗಳ ಜನ ಈ ವಿಚಾರದಲ್ಲಿ ವಿಚಾರಣಾಧಿಕಾರಿಗಳನ್ನು ಒತ್ತಾಯಿಸಿದ್ದಾರೆ.

ಈ ವಿಚಾರಣೆಯ ಒಂದು ವಿಶೇಷವೆಂದರೆ, ವೈದ್ಯರ ವಿರುದ್ಧ ದೂರು ಕೊಟ್ಟವರಲ್ಲಿ ಕೆಲವರು ವಿಚಾರಣೆಗೆ ಹಾಜರಾಗದೆ, ಅವರ ದೂರು ಪ್ರತಿಪಾದಿಸಲು ಅವರ ಸ್ಥಾನದಲ್ಲಿ ಬೇರೆ ಕೆಲವರು ಹಾಜರಾಗಿದ್ದ ಬಗ್ಗೆ ಜನ ನಗುತ್ತಿದ್ದರು.

**ಮುಂದೇನು ? ನ.ರಾ. ಪುರ ಬಂದ್ !**

ಸಾವಿರಾರು ಜನರ ಹಿತಾಸಕ್ತಿಯನ್ನು ಕಡೆಗಣಿಸಿ ಕೇವಲ ಏಳೆಂಟು ಜನರ ಹಿತಾಸಕ್ತಿಯ ಒತ್ತಡಕ್ಕೆ ಮಣಿದು ಈ ವೈದ್ಯಾಧಿಕಾರಿಯನ್ನು ವರ್ಗಾವಣೆ ಮಾಡಿದಲ್ಲಿ ಅವರನ್ನು ಉಳಿಸಿಕೊಳ್ಳಲು ಸಾರ್ವಜನಿಕರು ಉಗ್ರ ಪ್ರತಿಭಟನೆ, ಸಭೆ, ಮೆರವಣಿಗೆ, ಧರಣಿ ಸತ್ಯಾಗ್ರಹ, ಕೊನೆಗೆ ನ.ರಾ. ಪುರ ಬಂದ್ ಮುಂತಾದ ಚಳುವಳಿಗಳನ್ನು ನಡೆಸುವುದಾಗಿ ನೆರೆದಿದ್ದವರೆಲ್ಲರೂ ಘೋಷಿಸಿದರು.

(5ನೇ ಪುಟಕ್ಕೆ)

# ಏಲಕ್ಕಿ ಬೆಳೆಯಲ್ಲಿ ಕೀಟ ನಿವಾರಣೆ

(3ನೇ ಪುಟದಿಂದ)

ನಾಶಕಗಳ ಬದಲಾವಣೆ ಮಾಡುವುದರಿಂದ ಉತ್ತಮ ಫಲಿತಾಂಶ ಪಡೆಯಬಹುದು. ಕೀಟಗಳು ಕೀಟನಾಶಕಗಳನ್ನು ತಡೆದುಕೊಳ್ಳುವ ಶಕ್ತಿ ಪಡೆದುಕೊಳ್ಳುವುದನ್ನು ತಡೆಗಟ್ಟಲು ಸಾಧ್ಯವಾಗುತ್ತದೆ.

ಕಾಂಡ ಮತ್ತು ಕಾಯಿ ಕೊರೆಯುವ ಹುಳಗಳನ್ನು ನಿಯಂತ್ರಿಸಲು ಸೆಪ್ಟೆಂಬರ್, ಅಕ್ಟೋಬರ್ ತಿಂಗಳಿನಲ್ಲಿ ಕೀಟದ ಹಾವಳಿಗೆ ತುತ್ತಾದ ಕಂದುಗಳನ್ನು ಬುಡದಿಂದ 1 ರಿಂದ 2 ಇಂಚು ಬಿಟ್ಟು ತೆಗೆಯುವುದು, ಸಾಧಾರಣಾದ ನೆರಳನ್ನು ನಿಯಂತ್ರಿಸುವುದು, ಕಾಂಡ ಮತ್ತು ಕಾಯಿ ಕೊರೆಯುವ ಮರಿಹುಳಗಳನ್ನು ತಿನ್ನುವ ಹಳದಿ ರೆಕ್ಕೆಗಳನ್ನುಳ್ಳ 'ಮರಕುಟುಕ' (ಡೈನೊಪಿಯಂ ಬೆಂಗಾಲೆನ್ಸ್) ಹಕ್ಕಿಯ ಚಟುವಟಿಕೆಯನ್ನು ಪ್ರೋತ್ಸಾಹಿಸುವುದು ಮತ್ತು ಪರೋಪಜೀವಿಗಳಾದ ಎರಿಬೋರ್ಸ್, ಕ್ಸಾಂತೊಪಿಂಪ್ಲ, ಬ್ರಾಕಿಮೆರಿಯಾ ಕೀಟಗಳ ಸಂಖ್ಯೆ ಹೆಚ್ಚುವಂತೆ ಪ್ರೋತ್ಸಾಹಿಸುವುದರಿಂದ ಕೀಟ ನಾಶಕಗಳ ಉಪಯೋಗದ ಅವಶ್ಯಕತೆಯನ್ನು ನಿವಾರಿಸಲು ಸಾಧ್ಯವಾಗುತ್ತದೆ. ●

# ಸಾಕ್ಷರತೆಗಾಗಿ ಜಿಲ್ಲೆಯಲ್ಲಿ ವರ್ಷಕ್ಕೆ 12.72 ಕೋಟಿ ವೆಚ್ಚ

(ವರದಿ : ಕೃಷ್ಣ ಭಂಡಾರಿ)

**ಅಗಳಗಂಡಿ : ಪ್ರತಿ ವರ್ಷ ಜಿಲ್ಲೆಯಲ್ಲಿ ಸಾಕ್ಷರತೆಗಾಗಿ ವಿದ್ಯಾ ಇಲಾಖೆಯಿಂದ 12.72 ಕೋಟಿ ರೂ. ವೆಚ್ಚವಾಗುತ್ತಿದೆ ಆದರೆ ಇದರಲ್ಲಿ ಕೇವಲ ಶೇ. 4 ಭಾಗ ಮಾತ್ರ ಅಭಿವೃದ್ಧಿಗಾಗಿ ಬಳಕೆಯಾಗುತ್ತಿದ್ದು, ಉಳಿದ ಶೇ. 96 ಭಾಗ ಸಂಬಳ–ಸಾರಿಗೆಗಳಿಗೇ ವ್ಯಯವಾಗುತ್ತಿದೆ ಎಂದು ಜಿಲ್ಲಾ ಪರಿಷತ್ ಅಧ್ಯಕ್ಷ ಕೆ. ಎಂ ಕೃಷ್ಣಮೂರ್ತಿ ಇಲ್ಲಿ ಹೇಳಿದರು.**

ಈಚೆಗೆ ಇಲ್ಲಿನ ಸ.ಪ್ರೌಢಶಾಲೆಯಲ್ಲಿ ಸಾರ್ವಜನಿಕರ ವಂತಿಗೆಯಿಂದ ನಿರ್ಮಿಸಿದ ಹೆಚ್ಚುವರಿ ಕಟ್ಟಡದ ಉದ್ಘಾಟನೆ ನೆರವೇರಿಸಿ ಮಾತನಾಡುತ್ತಿದ್ದ ಅವರು, ಶಾಲಾ ವತಿಯಿಂದ ಸಲ್ಲಿಸಿದ ಮನವಿಗೆ ಉತ್ತರಿಸುತ್ತಾ, ತಡೆ ಹಿಡಿಯಲ್ಪಟ್ಟಿರುವ ಪ್ರೌಢಶಾಲೆಯ ಬೇಡಿಕೆಯ ಹಣವನ್ನು ಮಂಜೂರು ಮಾಡಲು ಶ್ರಮಿಸುವುದಾಗಿ ತಿಳಿಸಿದರಲ್ಲದೆ, ಶೀಘ್ರದಲ್ಲೇ ಶಾಲಾ ವಠಾರದಲ್ಲಿ ಕೊಳವೆ ಬಾವಿ ತೋಡಿಸುವ ವ್ಯವಸ್ಥೆ ಮಾಡುವುದಾಗಿ ಭರವಸೆಯಿತ್ತರು.

**ಸ್ವೋದ್ಯೋಗ ಯೋಜನೆ : ನೆರವಿನ ದುರುಪಯೋಗಕ್ಕೆ ವಿಷಾದ**

ಅಧಿಕಾರದ ವಿಕೇಂದ್ರೀಕರಣದ ಮೂಲಕ ಗ್ರಾಮಾಂತರ ಪ್ರದೇಶಗಳ ಸರ್ವಾಂಗೀಣ ಅಭಿವೃದ್ಧಿಗಾಗಿ ಜಿಲ್ಲಾ ಪರಿಷತ್–ಮಂಡಲ ಪಂಚಾಯ್ತಿ ವ್ಯವಸ್ಥೆಯನ್ನು ತರಲಾಯ್ತು ಎಂದ ಅವರು, ಈವರೆಗೆ ಸ್ವೋದ್ಯೋಗ ಯೋಜನೆಯಡಿ 8 ಕೋಟಿ ರೂ. ಗಳನ್ನು ಹಂಚಲಾಗಿದೆ ಎಂದರು. ಆದರೆ ಇದರಲ್ಲಿ ಶೇ. 60 ರಷ್ಟು ದುರುಪಯೋಗವಾಗಿರುವುದರ ಬಗ್ಗೆ ವಿಷಾದಿಸಿದರು. ಜಿಲ್ಲೆಯಾದ್ಯಂತ ದ್ವಾಕ್ರಾ ಯೋಜನೆಯಡಿ 220 ಘಟಕಗಳನ್ನು ಸ್ಥಾಪಿಸಲಾಗಿದೆ ಎಂದರು.

**ಶೀಘ್ರವೇ ಜಿಲ್ಲೆಗೆ 250 ಶಿಕ್ಷಕರು**

ಹಳ್ಳಿಗಾಡಿನ ಏಳಿಗೆಗೆ ವಿದ್ಯಾ ಪ್ರಸಾರ ಅತ್ಯಗತ್ಯ. ಈ ನಿಟ್ಟಿನಲ್ಲಿ ಸರ್ಕಾರ 1983 ರಿಂದೀಚೆಗೆ 22 ಸಾವಿರ ಶಿಕ್ಷಕರನ್ನು ನೇಮಿಸಿದ್ದು, ಇನ್ನೂ 15 ಸಾವಿರ ಶಿಕ್ಷಕರನ್ನು ನೇಮಿಸಲಿದೆ. ಗ್ರಾಮೀಣ ಸಾಕ್ಷರತೆಯ ಮಹತ್ವದಿಂದಾಗಿಯೇ ಅಗಳಗಂಡಿಯಲ್ಲಿ ಸರ್ಕಾರಿ ಪ್ರೌಢಶಾಲೆ ಸ್ಥಾಪಿಸಲಾಗಿದೆ ಎಂದು, ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಶಾಸಕ ಗೋವಿಂದ ಗೌಡರು ಹೇಳಿದರು.

ಜಿಲ್ಲೆಯಲ್ಲಿ 250 ಶಿಕ್ಷಕರ ನೇಮಕ ಶೀಘ್ರದಲ್ಲಿ ಆಗಲಿದೆ ಎಂದ ಅವರು ಶಿಕ್ಷಕರ ಆಯ್ಕೆಯಲ್ಲಿ ಯಾವುದೇ ರೀತಿಯ ಭ್ರಷ್ಟಾಚಾರಕ್ಕೆ ಅವಕಾಶ ನೀಡುವುದಿಲ್ಲ. ಈ ನಿಟ್ಟಿನಲ್ಲಿ ಈಚೆಗೆ ಹೊಸ ಸಮಿತಿ ರಚಿಸಲಾಗಿದೆ. ನನ್ನ ಕ್ಷೇತ್ರದಲ್ಲಿ ಈ ಸಾಲಿನಲ್ಲಿ 132 ಶಿಕ್ಷಕರ ಕೊರತೆ ಇದೆ. ಶಿಕ್ಷಕರ ಆಯ್ಕೆ ಅರ್ಹತೆಯ ಆಧಾರದ ಮೇಲೆ ನಡೆಯುವುದು ಎಂದರು.

(5ನೇ ಪುಟಕ್ಕೆ)

**ಪರಿಷತ್ ಕಲಾಪ**

ಜಿಲ್ಲಾಪರಿಷತ್ ಅಧ್ಯಕ್ಷರು, ಸದಸ್ಯರು ಇದೇ ಸಮಾರಂಭದಲ್ಲಿ ಜಿಲ್ಲಾಪರಿಷತ್ ಕಲಾಪ ನಡೆಸಿದಂತೆ ಕಂಡು ಬಂದು ಜನರಿಗೆ ಮನರಂಜನೆಯನ್ನು ನೀಡಿತು. ಜಿಲ್ಲಾಪರಿಷತ್ ಸದಸ್ಯ ಬಿ. ಜಿ. ಚಿದಂಬರ್ ತಮ್ಮ ಅತಿಥಿ ಭಾಷಣದಲ್ಲಿ ಅಭಿವೃದ್ಧಿ ಕೆಲಸಗಳ ಬಗ್ಗೆ ಪದೇ ಪದೇ ಎತ್ತಿದ ಆಕ್ಷೇಪಗಳಿಗೆ ಪದೇ ಪದೇ ಅಷ್ಟೇ ಚುರುಕಿನಿಂದ ಉತ್ತರಿಸಿದ ಜಿ. ಪ. ಅಧ್ಯಕ್ಷರು ತನ್ನ ಚುರುಕುತನದ ಬಗ್ಗೆ ಜನರ ಮೆಚ್ಚುಗೆ ಗಳಿಸಿದರು. ಕೊನೆಗೆ ವೇದಿಕೆಯಲ್ಲಿದ್ದ ಆನಂದರಾಮ ಭಟ್ಟರು ಈ ವೇದಿಕೆಯಲ್ಲಿ ಪರಿಷತ್ ಕಲಾಪ ನಡೆಸಬೇಡಿ ಎಂದು 'ಮನವಿ' ಮಾಡಿದ ಮೇಲೆ ಈ 'ಸ್ನೇಹಜಗಳ' ನಿಂತಿತು.

# ಲಾಭ ಗಳಿಕೆ ಹಾದಿಯಲ್ಲಿ ಡಿ.ಸಿ.ಸಿ. ಬ್ಯಾಂಕ್ ; ಸಾಲ ವಸೂಲಾತಿಯಲ್ಲಿ ಉತ್ತಮ ಪ್ರಗತಿ

**ಚಿಕ್ಕಮಗಳೂರು : ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ 1986–87ನೇ ಸಾಲಿನಲ್ಲಿ 14.15 ಲಕ್ಷ ರೂ. ಲಾಭ ಗಳಿಸಿದ್ದು, ಸಾಲ ವಸೂಲಾತಿಯಲ್ಲಿ ಸಹ ಉತ್ತಮ ಪ್ರಗತಿ ಸಾಧಿಸಿದೆ ಎಂದು ಜಿಲ್ಲಾ ಬ್ಯಾಂಕ್ ಅಧ್ಯಕ್ಷ ಕೆ. ಎಂ. ಶ್ರೀನಿವಾಸ್ ಈಚೆಗೆ ಪತ್ರಿಕಾ ಗೋಷ್ಠಿಯಲ್ಲಿ ತಿಳಿಸಿದರು.**

ಕಳೆದ ನಾಲ್ಕು ವರ್ಷಗಳಲ್ಲೂ ನಷ್ಟವನ್ನೇ ಅನುಭವಿಸಿಕೊಂಡು ಬಂದಿದ್ದ ಬ್ಯಾಂಕ್ ಈ ವರ್ಷ ಲಾಭಗಳಿಸಿರುವುದು ಮಾತ್ರವಲ್ಲದೆ, ಠೇವಣಿ ಸಂಗ್ರಹಣೆ ಹಾಗೂ ಸಾಲ ವಸೂಲಾತಿಯಲ್ಲಿ ಸಹ ಗಣನೀಯ ಪ್ರಗತಿ ಸಾಧಿಸಿದೆ ಎಂದು ಅವರು ಹೇಳಿದರು.

1955 ರಲ್ಲಿ ಆರಂಭವಾದ ಬ್ಯಾಂಕ್ ಈಗ 11 ಗ್ರಾಮಾಂತರ ಶಾಖೆಗಳೂ ಸೇರಿ 21 ಶಾಖೆಗಳನ್ನು ಹೊಂದಿದ್ದು, ಇನ್ನೂ 2 ಗ್ರಾಮಾಂತರ ಶಾಖೆಗಳನ್ನು ತೆರೆಯುವ ಯೋಜನೆ ಹೊಂದಿದೆ.

**ಶೇರು ಬಂಡವಾಳ, ಠೇವಣಿ**

ರಾಜ್ಯ ಸರ್ಕಾರ ಮತ್ತು 283 ಸಹಕಾರ ಸಂಘಗಳು ಬ್ಯಾಂಕಿನ ಸದಸ್ಯರು. ಸರ್ಕಾರದ ಶೇರು 31.23 ಲಕ್ಷ, ಸಹಕಾರ ಸಂಘಗಳದು 92.55 ಲಕ್ಷ, ಒಟ್ಟು 123.78 ಲಕ್ಷ ರೂ. ಶೇರು ಬಂಡವಾಳವಿದೆ. ಸರ್ಕಾರದಿಂದ ಪುನಃ 50 ಲಕ್ಷ ರೂ. ಶೇರು ಬಂಡವಾಳಕ್ಕಾಗಿ ಪ್ರಸ್ತಾವನೆ ಸಲ್ಲಿಸಲಾಗಿದೆ. ಬ್ಯಾಂಕಿನ ಸ್ವಂತ ಬಂಡವಾಳ (30.6.87) 189.75 ಲಕ್ಷಕ್ಕೂ, ದುಡಿಯುವ ಬಂಡವಾಳ 1165.76 ಲಕ್ಷಕ್ಕೂ ಏರಿದೆ.

**ಬ್ಯಾಂಕಿನ ಠೇವಣಾತಿ 85 ರಲ್ಲಿ 388.94 ಲಕ್ಷ ರೂ. ಇದ್ದುದು ಈಗ 546.41 ಲಕ್ಷ ರೂ.ಗೆ ಏರಿದೆ.**

**ಸಾಲ ಸೌಲಭ್ಯಗಳು**

ಬ್ಯಾಂಕ್ ಕೃಷಿಗೆ ಮಾತ್ರವಲ್ಲದೆ, ಸಣ್ಣ ಹಿಡುವಳಿದಾರರು ಮತ್ತು ಕೃಷಿ ಕಾರ್ಮಿಕರಿಗೆ ಕುರಿ–ಕೋಳಿ ಸಾಕಾಣಿಕೆ, ಹೈನುಗಾರಿಕೆ, ಮುಂತಾದ ವಿವಿಧ ಕೃಷಿಯೇತರ ಉದ್ದೇಶಗಳಿಗೆ ಮತ್ತು ಮಹಿಳಾಭಿವೃದ್ಧಿ, ಸಹಕಾರ ರಂಗದಲ್ಲಿ ತಯಾರಾಗುವ ಅಗತ್ಯ ವಸ್ತುಗಳಿಗೆ ಮಾರಾಟ ಸೌಕರ್ಯ ಒದಗಿಸುವಿಕೆ ಮುಂತಾದ ಹಲವು ಬಗೆಯಲ್ಲಿ ಸಾಲ

(5ನೇ ಪುಟಕ್ಕೆ)

## ಸಾಲ ವಸೂಲಾತಿಯಲ್ಲಿ ಕರಿಮನೆ ಭೂ ಬ್ಯಾಂಕ್ ರಾಜ್ಯದಲ್ಲೇ ಪ್ರಥಮ ;

# ಈ ವರ್ಷ 1 ಕೋಟಿ ರೂ. ಸಾಲ ನೀಡಿಕೆ ಗುರಿ

**ಕೊಪ್ಪ : ಈ ತಾಲ್ಲೂಕಿನ ಕರಿಮನೆ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಈ ಸಾಲಿನಲ್ಲಿ ಅರ್ಧ ಕೋಟಿ ರೂ. ಗೂ ಹೆಚ್ಚು ಸಾಲ ನೀಡಿದ್ದು ವಸೂಲಾತಿಯಲ್ಲಿ ಶೇ. 100 ರಷ್ಟು ಸಾಧನೆ ಮಾಡಿ ತನೆಲ್ಲ ಹದಿನಾರೂ ಯೋಜನೆಗಳಲ್ಲಿ ಇಡೀ ರಾಜ್ಯದಲ್ಲೇ ಪ್ರಥಮ ಸ್ಥಾನದಲ್ಲಿದೆ.**

ಬ್ಯಾಂಕಿನಲ್ಲಿ ಕರೆದಿದ್ದ ಪತ್ರಿಕಾ ಗೋಷ್ಠಿಯಲ್ಲಿ ಬ್ಯಾಂಕಿನ ಅಧ್ಯಕ್ಷ ಕೆ. ಆರ್. ಚಂದ್ರಶೇಖರ್ ಈ ವಿಷಯ ತಿಳಿಸಿದ್ದಾರೆ.

ಬ್ಯಾಂಕ್ 87-88 ರಲ್ಲಿ 1 ಕೋಟಿ ರೂ. ಸಾಲ ನೀಡುವ ಗುರಿ ಹೊಂದಿದೆ. ಬ್ಯಾಂಕಿನ ವ್ಯಾಪ್ತಿಯ ಎಲ್ಲ 36 ಹಳ್ಳಿಗಳ ರೈತರಿಗೂ ನೆರವು ನೀಡಲಾಗುವುದು. ಕೃಷಿಯೇತರ ಯೋಜನೆಯ ಅನ್ವಯ ಗ್ರಾಮೀಣ ಕುಶಲ ಕರ್ಮಿಗಳಿಗೆ ಸಣ್ಣ ಉದ್ಯಮಕ್ಕೆ ನೆರವು ನೀಡಲಾಗುವುದು ಎಂದೂ ಅವರು ತಿಳಿಸಿದರು.

1930 ರಲ್ಲಿ ಸ್ಥಾಪನೆಗೊಂಡು ಆ ನಂತರದ ದಿನಗಳಲ್ಲಿ ಸಿಬ್ಬಂದಿ ಕೊರತೆ ಇದ್ದಾಗಲೂ ಅಭಿವೃದ್ಧಿ ಪಥದತ್ತ ಸಾಗಿದ ಬ್ಯಾಂಕ್ ನಡೆದು ಬಂದ ದಾರಿಯನ್ನೂ, 1960 ರಿಂದೀಚೆಗಿನ ಶೀಘ್ರಗತಿಯ ಮುನ್ನಡೆಯನ್ನೂ ಅವರು ಅಂಕಿ-ಅಂಶ ಸಹಿತ ವಿವರಿಸಿದರು.

### ನಿರಂತರ ಪ್ರಶಸ್ತಿ

1971-72ರಲ್ಲಿ ರಾಜ್ಯದಲ್ಲಿಯೇ ಪ್ರಗತಿಪರ ಬ್ಯಾಂಕ್ ಎಂಬ ಪ್ರಶಸ್ತಿ ಮತ್ತು ಪಾರಿತೋಷಕವನ್ನು ಪಡೆದ ಬ್ಯಾಂಕ್, ವಸೂಲಾತಿ ಮತ್ತು ಸಾಲ ವಿತರಣೆಯಲ್ಲಿ ಸತತವಾಗಿ ಮುನ್ನಡೆದು 79-80 ರಿಂದ ನಿರಂತರವಾಗಿ ರಾಜ್ಯ ಮಟ್ಟದಲ್ಲಿ ಪ್ರಶಸ್ತಿಗಳನ್ನು ಪಡೆದುಕೊಂಡಿದೆ. 81-82,82-83 ರಲ್ಲಿ ರಾಜ್ಯ ಮಟ್ಟದಲ್ಲಿ ಕಾರ್ಯನಿರ್ವಹಿಸಿದ ಅತ್ಯುತ್ತಮ ಬ್ಯಾಂಕ್ ಎನ್ನುವ ಬಗ್ಗೆ ಪಾರಿತೋಷಕ, ಪ್ರಶಸ್ತಿ, ಪತ್ರ, ನಗದು ಬಹುಮಾನ ಪಡೆದಿದೆ.

### 2ನೇ ಸ್ಥಾನ

83 ರಿಂದ 86ರ ವರೆಗಿನ 3 ವರ್ಷಗಳಲ್ಲಿ ವಸೂಲಾತಿಯಲ್ಲಿ ರಾಜ್ಯ ಮಟ್ಟದ 2 ನೇ ಸ್ಥಾನಗಳಿಸಿದೆ; 17 ವರ್ಷಗಳಿಂದ ನಿರಂತರವಾಗಿ ಲಾಭದಲ್ಲಿ ವ್ಯವಹರಿಸುತ್ತಿದೆ; 76-77 ನೇ ಸಾಲಿನಿಂದ ಬ್ಯಾಂಕಿನ ಆಡಿಟ್ ವರ್ಗೀಕರಣ 'ಎ' ತರಗತಿಯಲ್ಲಿದೆ.

ಈವರೆಗೆ ಬ್ಯಾಂಕಿನ ಸಾಲ ಪಡೆದ ಸದಸ್ಯರ ಸಂಖ್ಯೆ 1548. ಇವರಲ್ಲಿ 610 ಜನ ಸಣ್ಣ ರೈತ ಸದಸ್ಯರು. ಬ್ಯಾಂಕಿನಲ್ಲಿ ಒಟ್ಟು 230 ಪರಿಶಿಷ್ಟ ಜಾತಿ ಮತ್ತು ವರ್ಗದ ಸದಸ್ಯರಿದ್ದು ಈವರೆಗೆ 187 ಜನ ಈ ವರ್ಗದ ಸದಸ್ಯರು ಬ್ಯಾಂಕಿನಿಂದ ಆರ್ಥಿಕ ನೆರವು ಪಡೆದಿದ್ದಾರೆ.

### ಕಾಫಿಗೆ ಸಾಲ

ಬ್ಯಾಂಕ್ 1100 ಎಕರೆಗಳಿಗೂ ಮಿಕ್ಕಿ ಕಾಫಿ ಯೋಜನೆಯಲ್ಲಿ ಸಾಲ ನೀಡಿದೆ. ನೀರಾವರಿ ಯೋಜನೆಯಲ್ಲಿ 25 ಲಕ್ಷ ರೂ, ಗೋಬರ್ ಗ್ಯಾಸ್ ಯೋಜನೆಗೆ 2 ಲಕ್ಷ, ಹೈನುಗಾರಿಕೆಯಲ್ಲಿ 5 ಲಕ್ಷ, ಕೃಷಿ ಯಾಂತ್ರೀಕರಣದಲ್ಲಿ (ಪವರ್ ಟಿಲ್ಲರ್, ಟ್ರಾಕ್ಟರ್ ಕೊಳ್ಳಲು) 25 ಲಕ್ಷ, ಸಾಮಾನ್ಯ ಯೋಜನೆಯಲ್ಲಿ 50 ಲಕ್ಷ ರೂ. ಸಾಲ ನೀಡಲಾಗಿದೆ.

ತೋಟದ ಬೆಳೆಗಳಾದ ಅಡಿಕೆ, ಕರಿಮೆಣಸು ಮತ್ತು ತೆಂಗಿನ ಅಭಿವೃದ್ಧಿ ಯೋಜನೆಗಳಲ್ಲಿ ಬ್ಯಾಂಕ್ ಸಾಲ ನೀಡುತ್ತಿದೆ. ಇತರೆ

(6ನೇ ಪುಟಕ್ಕೆ)

## ಡಾ|| ಮಹಾದೇವಪ್ಪ ....

(4ನೇ ಪುಟದಿಂದ)

5-4-87ರ 'ಮುಂಜಾವು' ವರದಿ ಮಾಡಿರುವಂತೆ, ಬೇರೆಡೆಯಿಂದ ಇಲ್ಲಿಗೆ ಶಿಕ್ಷಾತ್ಮಕ ವರ್ಗಾವಣೆ ಹೊಂದಿ ಬಂದ ಕಾಂಪೌಂಡರನೊಬ್ಬ, ತನ್ನ 'ಕೈಚಳಕ'ಗಳಿಗೆ ಈ ವೈದ್ಯಾಧಿಕಾರಿ ಅವಕಾಶ ಕೊಡದಾದಾಗ, ತನ್ನಂಥ 'ಸಮಾನ ಮನಸ್ಕ'ರಾದ ನಾಲ್ಕೈದು ಜನರನ್ನು ಸೇರಿಸಿಕೊಂಡು ಇವರ ಮೇಲೆ 'ಸಾರ್ವಜನಿಕ' ಅರ್ಜಿಗಳನ್ನು ಬರೆಯುತೊಡಗಿದ್ದನ್ನು ಇಲ್ಲಿ ಸ್ಮರಿಸಬಹುದು.

ಈಗ ಈ ಪ್ರಕರಣಕ್ಕೆ ಜನತಾದ ವನಮಾಲಮ್ಮನಂಥ ಕೆಲ ರಾಜಕಾರಣಿಗಳ ಕೃಪಾಶ್ರಯವೂ ದೊರೆತು, ವಿಚಾರಣೆಯ ಮೇಲೆ ವಿಚಾರಣೆಗಳು ('ಮೇಲೆ' ಅನ್ನುವುದಕ್ಕಿಂತ 'ಕೆಳಗೆ' ಅನ್ನುವುದೇ ಸರಿ— ಮೊದಲು ವಿಭಾಗೀಯ ಉಪ ನಿರ್ದೇಶಕರಿಂದ, ಈಗ ಜಿಲ್ಲಾ ಸಹಾಯಕ ನಿರ್ದೇಶಕರಿಂದ !) ನಡೆಯತೊಡಗಿದ್ದು, ಸಾರ್ವಜನಿಕರ ಸೌಕರ್ಯ ಮತ್ತು ನೆಮ್ಮದಿ ಕದಡುತ್ತಿದೆ.

## ಲಾಭ ಗಳಿಕೆ ಹಾದಿಯಲ್ಲಿ ಡಿ.ಸಿ.ಸಿ. ಬ್ಯಾಂಕ್ ;

(4ನೇ ಪುಟದಿಂದ)

ಸೌಲಭ್ಯ ನೀಡಲಾಗುತ್ತಿದೆ.

ಈ ವರ್ಷ ಸಹಕಾರ ಸಂಘಗಳ ಮೂಲಕ 5331 ಜನರಿಗೆ 437 60 ಲಕ್ಷ ರೂ. ಈ ಪೈಕಿ ಸಣ್ಣ-ಅತಿಸಣ್ಣ ಹಿಡುವಳಿದಾರರಿಗೆ 105 ಲಕ್ಷ, ಪರಿಶಿಷ್ಟ ಜನಾಂಗದವರಿಗೆ 8 43 ಲಕ್ಷ ರೂ, ಸಾಲ ನೀಡಲಾಗಿದೆ.

ಕಾಫಿ ಸಾಲವನ್ನು ಎಕರೆ ಮಿತಿಯಂತೆ 40 ಲಕ್ಷ ರೂ. ವರೆಗೂ ಏರಿಸಲಾಗಿದೆ. ಕಿತ್ತಳೆ ಸಾಲವೆಂಬ ಹೊಸ ಯೋಜನೆ ಜಾರಿ ಮಾಡಲಾಗಿದೆ. ಅಲ್ಲದೆ ಬ್ಯಾಂಕಿನ ಎಲ್ಲಾ ಶಾಖೆಗಳಲ್ಲೂ ಚಿನ್ನಾಭರಣಗಳ ಸಾಲವನ್ನು ಈಗಾಗಲೇ ನೀಡಲಾಗುತ್ತಿದೆ.

### ಸಾಲ ವಸೂಲಾತಿ

ಜೂನ್ ಅಂತ್ಯಕ್ಕೆ ಕಾಫಿ ಸಾಲವೂ ಸೇರಿ ಅಲ್ಪಾವಧಿ. ಮಧ್ಯಮಾವಧಿ ಮತ್ತು ಪರಿವರ್ತನಾ ಮಧ್ಯಮಾವಧಿ ಸಾಲಗಳಲ್ಲಿ ಒಟ್ಟು ಶೇ. 50.02 ರಷ್ಟು ವಸೂಲಾತಿ ಸಾಧಿಸಿದೆ, ವ್ಯವಸಾಯೇತರ ಸಾಲದ ವಸೂಲಾತಿ ಶೇ. 98.49 ಆಗಿದ್ದು, ಒಟ್ಟಾರೆ ಶೇ. 76.70 ರಷ್ಟು ಸಾಧಿಸಿದಂತಾಯಿತು.

### ಬಾಕಿ, ಸುಸ್ತಿ

ಬ್ಯಾಂಕಿಗೆ 139 ಸಹಕಾರ ಸಂಘಗಳಿಂದ 895.25 ಲಕ್ಷ ರೂ. ವಿವಿಧ ಸಾಲಗಳು ಬರಬೇಕಿದೆ, ಸುಸ್ತಿ ಬಾಕಿ 397.05 ಲಕ್ಷ ಇದೆ. ರಾಜ್ಯ ಅಪೆಕ್ಸ್ ಬ್ಯಾಂಕಿನಲ್ಲಿ 428 ಲಕ್ಷ ಸಾಲ ಬಾಕಿ ಇದೆ. ಈ ಸಾಲಿನಲ್ಲಿ ಅಪೆಕ್ಸ್ ಬ್ಯಾಂಕಿನಿಂದ 50 ಲಕ್ಷ ರೂ. ಅಲ್ಪಾವಧಿ ಸಾಲ ಕೇಳಲಾಗಿದೆ.

ಬ್ಯಾಂಕು ಈವರೆಗೆ 4 ಕೋಟಿ ರೂ. ಸಾಲ ನೀಡಿದ್ದು ಇನ್ನೂ ಬೇಡಿಕೆಯಿದೆ ರಾಜ್ಯ ಬ್ಯಾಂಕಿನಿಂದ 5 ಕೋಟಿ ರೂ. ಸಾಲ ನೀಡಲು ಕೇಳಲಾಗಿದೆ.

**ರಾಷ್ಟ್ರೀಯ ಸಹಕಾರ ನಿಗಮ ಮತ್ತು ಕರ್ನಾಟಕ ರಾಜ್ಯ ಸರ್ಕಾರಗಳು ಚಿಕ್ಕಮಗಳೂರು ಜಿಲ್ಲೆಯನ್ನು ಸಮಗ್ರ ಸಹಕಾರ ಅಭಿವೃದ್ಧಿ ಯೋಜನೆಗೆ ಆಯ್ದುಕೊಂಡಿವೆ.**

### ದುರುಪಯೋಗದ ಬಗ್ಗೆ ಕ್ರಮ

ಈ ಬ್ಯಾಂಕಿನ ಶಾಖೆಗಳಲ್ಲಿ ದುರುಪಯೋಗದ ಆರೋಪವಿದೆಯಾದರೂ ಲಿಖಿತ ದೂರುಗಳು ಬಂದಿಲ್ಲ. ಆ ರೀತಿ ದೂರು ಬಂದರೆ ಸೂಕ್ತ ಕ್ರಮ ಜರುಗಿಸಲಾಗುವುದು. ಈವರೆಗೆ ದುರುಪಯೋಗ. ಸಾಬೀತಾದ 5 ಜನ ಕಾರ್ಯದರ್ಶಿಗಳನ್ನು ವಜಾ ಮಾಡಲಾಗಿದ್ದು, 23 ಜನರನ್ನು ತನಿಖೆಗೆ ಒಳಪಡಿಸಲಾಗಿದೆ ಎಂದು ತಿಳಿಸಿದ ಶ್ರೀನಿವಾಸ್, ಆರೋಪಗಳಲ್ಲಿ ಹೇಳುವಷ್ಟು ದೊಡ್ಡ ರೀತಿಯಲ್ಲಿ ದುರುಪಯೋಗವಾಗುತ್ತಿದ್ದರೆ ಈ ರೀತಿಯ ಪ್ರಗತಿ ಹೇಗೆ ಸಾಧ್ಯವಾಗುತ್ತಿತ್ತು ಎಂದು ಪ್ರಶ್ನಿಸಿದರು.

# ಕೊಪ್ಪ ಕೃಷಿ - ಗ್ರಾಮೀಣ ಬ್ಯಾಂಕ್ ಸಾಧನೆ

ಕೊಪ್ಪ : ಇಲ್ಲಿನ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ 1986-87 ರಲ್ಲಿ ಸಾಲ ವಸೂಲಾತಿಯಲ್ಲಿ ರಾಜ್ಯ ಬ್ಯಾಂಕು ನಿಗದಿಪಡಿಸಿದ್ದ ಶೇ. 75ರ ಗುರಿಯನ್ನು ದಾಟಿ, ರಾಜ್ಯದ 25 ಮೊದಲ ವರ್ಗದ ಬ್ಯಾಂಕುಗಳಲ್ಲೊಂದೆಂಬ ಹೆಗ್ಗಳಿಕೆಗೆ ಪಾತ್ರವಾಗಿದೆ ಎಂದು ಅದರ ಅಧ್ಯಕ್ಷ ಕೋಣೆಗದ್ದೆ ಪದ್ಮನಾಭ ತಿಳಿಸಿದ್ದಾರೆ.

ಕಳೆದ ಸಾಲಿನಲ್ಲಿ 17.10 ಲಕ್ಷ ರೂ. ಸಾಲ ಹಂಚಿದ್ದ ಬ್ಯಾಂಕ್ ಈ ವರ್ಷ 54 ಲಕ್ಷ ರೂ. ಮಂಜೂರು ಮಾಡಿದ್ದು ಆ ಪೈಕಿ 31 ಲಕ್ಷ ರೂ. ಸಾಲವನ್ನು ಈಗಾಗಲೇ ಪಾವತಿಸಿದೆ.

ಪಂಪ್ ಸೆಟ್, ಬಾವಿ, ಪವರ್ ಟಿಲ್ಲರ್, ಟ್ರ್ಯಾಕ್ಟರ್, ಕಾಫಿ, ತೆಂಗು, ಕಾಳುಮೆಣಸು, ಸಪೋಟಾ, ಏಲಕ್ಕಿ, ಅಡಿಕೆ ಪುನರ್ ನಾಟಿ, ಹೈನುಗಾರಿಕೆ, ಮೇಕೆ ಸಾಕಾಣಿಕೆ, ಎತ್ತು-ಗಾಡಿ, ಭೂ ಸಮತಳ, ತಂತಿ ಬೇಲಿ, ಹಸುಗಳ ಕೊಟ್ಟಿಗೆ, ಧಾನ್ಯ ಶೇಖರಣೆ ಮಳಿಗೆ, ಬಾಳೆ ಅಭಿವೃದ್ಧಿ ಮುಂತಾದ ವಿವಿಧ ಉದ್ದೇಶಗಳಿಗೆ ಬ್ಯಾಂಕು ಈ ಸಾಲದ ನೆರವು ನೀಡಿದೆ ಅಲ್ಲದೆ ಕೃಷಿಯೇತರ ಸಾಲಕ್ಕಾಗಿ 16 ಜನರ ಅರ್ಜಿಗಳನ್ನು ಮಂಜೂರು ಮಾಡಿ ಕಳಿಸಲಾಗಿದೆ.

### ಹೊಸ ಸಾಲಕ್ಕೆ ಹಣ

ವಸೂಲಾತಿಯಲ್ಲಿನ ಈ ಸಾಧನೆಯಿಂದಾಗಿ ಬ್ಯಾಂಕಿಗೆ ಪ್ರಸಕ್ತ ಸಾಲಿಗೆ ತಾತ್ಕಾಲಿಕ ಸಾಲ ನೀಡಲು ವಿಶೇಷ ಯೋಜನೆಯಲ್ಲಿ 9 ಲಕ್ಷ ರೂ., ಸಾಮಾನ್ಯ ಯೋಜನೆಯಲ್ಲಿ 7 ಲಕ್ಷ ರೂ. ಮತ್ತು ಕೃಷಿಯೇತರ ಸಾಲಕ್ಕೆ 10 ಲಕ್ಷ ರೂ. ಮಂಜೂರಾಗಿದ್ದು, ಅರ್ಹ ರೈತರಿಂದ ಅರ್ಜಿ ಆಹ್ವಾನಿಸಲಾಗಿದೆ.

### ಸೋಡಿ, ಮಿತ ವ್ಯಯ

ರಾಜ್ಯ ಬ್ಯಾಂಕಿನ ಕಂತನ್ನು ಸಕಾಲದಲ್ಲಿ ಮರು ಪಾವತಿ ಮಾಡಿದ್ದಕ್ಕಾಗಿ ಬ್ಯಾಂಕಿಗೆ 28 ಸಾವಿರ ರೂ. ವಿಶೇಷ ರಿಬೇಟ್ ಬಂದಿದೆಯಲ್ಲದೆ ಆಡಳಿತ ನಿರ್ವಹಣಾ ವೆಚ್ಚದಲ್ಲಿ ಕೂಡ ಸುಮಾರು 25 ಸಾವಿರ ರೂ. ಗಳಷ್ಟು ಉಳಿತಾಯ ಮಾಡಲಾಗಿದೆ. ಕಳೆದ ವರ್ಷ 1.20 ಲಕ್ಷ ರೂ. ಲಾಭ ಗಳಿಸಿದ್ದ ಬ್ಯಾಂಕ್ ಈ ಬಾರಿ 1.05 ಲಕ್ಷ ರೂ. ಲಾಭ ಗಳಿಸುವ ಅಂದಾಜಿದೆ

ಈ ಪ್ರಗತಿಗಾಗಿ ಆಡಳಿತ ಮಂಡಳಿ ಸದಸ್ಯರನ್ನೂ, ಬ್ಯಾಂಕಿನ ಕಾರ್ಯದರ್ಶಿ ಮತ್ತು ಸಿಬ್ಬಂದಿಗಳನ್ನೂ ಅಧ್ಯಕ್ಷರು ಅಭಿನಂದಿಸಿದ್ದಾರೆ.

## ಸಾಕ್ಷರತೆಗೆ ವರ್ಷಕ್ಕೆ 12.72 ಕೋಟಿ ವೆಚ್ಚ

(4ನೇ ಪುಟದಿಂದ)

### ಗ್ರಾಮ ಸಭೆಯ ಮೂಲಕ ಅಭಿವೃದ್ಧಿ ಕೆಲಸ

ಗ್ರಾಮ ಸಭೆಗಳ ಶಿಫಾರಸುಗಳನ್ನು ಅಂಗೀಕರಿಸುತ್ತಾ ಈ ಸಭೆಗಳ ನಿರ್ದೇಶನದಂತೆ ಮಂಡಲಗಳ ಅಭಿವೃದ್ಧಿ ಕಾರ್ಯ ನಡೆಸಿ ಜನತೆಯ ಆಶೋತ್ತರಕ್ಕೆ ಜನ ಪ್ರತಿನಿಧಿಗಳು ನೇರವಾಗಿ ಸ್ಪಂದಿಸಬೇಕೆಂದು ಕರೆಯಿತ್ತ ಅವರು, ಅಭಿವೃದ್ಧಿ ಕೆಲಸಗಳನ್ನು ಜಿಲ್ಲಾ ಪರಿಷತ್‌ಗೆ ವರ್ಗಾಯಿಸುವ ಮುಂಚೆ, 8 ತಿಂಗಳ ಹಿಂದೆ ಸರ್ಕಾರದ **'ಸೇತು ಬಂಧನ'** ಯೋಜನೆಯಡಿ 17.20 ಲಕ್ಷ ರೂ. ವೆಚ್ಚದಲ್ಲಿ 17 ಸಂಪರ್ಕ ಸೇತುವೆಗಳನ್ನು ತಾನು ಈ ಕ್ಷೇತ್ರಕ್ಕೆ ಮಂಜೂರು ಮಾಡಿಸಿದ್ದನ್ನು ಸ್ಮರಿಸಿದರು.

ಶಾಲಾ ಮುಖ್ಯೋಪಾಧ್ಯಾಯರಾದ ಬಸಪ್ಪ ಸ್ವಾಗತಿಸಿದರು; ಬಿ. ಜಿ. ಚಿದಂಬರ್, ಎಚ್. ಎಂ. ಮಾಸ್ತಿ, ಶ್ರೀಮತಿ ಕಾವೇರಮ್ಮ, ಆನಂದರಾಮ ಭಟ್, ಡಿಡಿಪಿಐ ರಾಮಸ್ವಾಮಿ ಅಯ್ಯಂಗಾರ್, ಕೆ. ಎಂ. ಶ್ರೀನಿವಾಸ್, ಕೆ. ಸಿ. ಸತೀಶ್ ಅತಿಥಿಗಳಾಗಿ ಆಗಮಿಸಿದ್ದರು. ಈ ಸಂದರ್ಭದಲ್ಲಿ ಕೆರೆಮನೆ ತಿಮ್ಮಪ್ಪಯ್ಯನವರನ್ನು ಶಾಲು ಹೊದಿಸಿ ಸನ್ಮಾನಿಸಲಾಯಿತು. ಬಿ ಹಾಲಪ್ಪಗೌಡ ವಂದಿಸಿದರು.

## ಕೃಷಿ ಸಾಲ ವಸೂಲಾತಿ : ರಾಜ್ಯದಲ್ಲಿ ಜಿಲ್ಲೆ ದ್ವಿತೀಯ

ಚಿಕ್ಕಮಗಳೂರು : ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್‌ಗಳ ಮೂಲಕ ನೀಡಿದ ಸಾಲ ವಸೂಲಾತಿಯಲ್ಲಿ ಜಿಲ್ಲೆಯು ರಾಜ್ಯದಲ್ಲಿ 2ನೇ ಸ್ಥಾನದಲ್ಲಿದೆ.

# ಕರಿಮನೆ ಭೂ ಬ್ಯಾಂಕ್

(5ನೇ ಪುಟದಿಂದ)
ಯೋಜನೆಗಳಾದ ಬಾವಿ, ನೀರು ಶೇಖರಣಾ ತೊಟ್ಟಿ, ಎತ್ತುಗಾಡಿ, ಏಲಕ್ಕಿ, ಬಾಳೆ, ತುಂತುರು ನೀರಾವರಿ, ಕಾಫಿ ಒಣಗಿಸುವ ಕಣ, ಅಡಿಕೆ ಪುನರ್ ನಾಟಿ ಮುಂತಾದ ಯೋಜನೆಗಳಲ್ಲೂ ಬ್ಯಾಂಕ್ ಸಾಕಷ್ಟು ಸಾಲ ನೀಡಿದೆ.

**9 ಲಕ್ಷ ರೂ. ಠೇವಣಿ**

ಬ್ಯಾಂಕಿನ ವಿವಿಧ ನಿಧಿಗಳನ್ನು ರಾಜ್ಯ ಬ್ಯಾಂಕ್ ಮತ್ತು ವಿವಿಧ ಸಂಘ ಸಂಸ್ಥೆಗಳಲ್ಲಿ ಠೇವಣಿಸಲಾಗಿದೆ. ರಾಜ್ಯ ಬ್ಯಾಂಕಿನಲ್ಲಿ 8,03 ಲಕ್ಷ ರೂ. ಮತ್ತು ಇತರೆ ಸಂಘ ಸಂಸ್ಥೆಗಳಲ್ಲಿ 1,10,800 ರೂ. ಗಳನ್ನು ಇಡಲಾಗಿದೆ.

**ಅಪರೂಪದ ಸಾಧನೆ**

ಬ್ಯಾಂಕ್ ಕಳೆದ ಕೆಲವು ವರ್ಷಗಳಿಂದ ಸಾಧಿಸಲಾಗದೆ ಇದ್ದ ಗುರಿಯನ್ನು ಜೂನ್ ಅಂತ್ಯಕ್ಕೆ ಅಂತ್ಯಗೊಂಡ 1986-87 ನೇ ಸಹಕಾರಿ ವರ್ಷದಲ್ಲಿ ಸಾಧಿಸಿದೆ. ಈ ಸಾಲಿನಲ್ಲಿ ನಿವ್ವಳ ಲಾಭ 3 ಲಕ್ಷಕ್ಕೂ ಮೀರಬಹುದೆಂದು ಅಂದಾಜು ಮಾಡಲಾಗಿದೆ ಎಂದ ಚಂದ್ರಶೇಖರ್, ಈ ಸಾಧನೆಗೆ ಬ್ಯಾಂಕಿನ ಕಾರ್ಯದರ್ಶಿ, ಸಿಬ್ಬಂದಿ ವರ್ಗ ಮತ್ತು ನಿರ್ದೇಶಕ ಮಂಡಳಿಯ ಪೂರ್ಣ ಸಹಕಾರ ಮತ್ತು ದಕ್ಷತೆಯೇ ಕಾರಣವಾಗಿದೆ ಎಂದರು. ●

## ತುಂಡು ಭೂಮಿ ಪರಭಾರೆ ನಿಷೇಧ ರದ್ದಿಗೆ ಆಗ್ರಹ

ನ. ರಾ. ಪುರ : ಮಲೆನಾಡಿನ ರೈತರಿಗೆ ತೊಂದರೆಯಾಗಿರುವ "ತುಂಡು ಭೂಮಿ ಪರಭಾರೆ ನಿಷೇಧ ಕಾಯಿದೆ"ಯನ್ನು ರದ್ದು ಪಡಿಸುವಂತೆ ಸಕಾರಣವಾಗಿ ವಿವರಿಸಿ, ಕರ್ನಾಟಕ ರಾಜ್ಯದ ವಿಧಾನ ಪರಿಷತ್ತಿನ ಉಪ ಸಭಾಪತಿಗಳಿಗೆ ಮೂಡಬಾಗಿಲು ಎಂ. ವಿ. ಶ್ರೀನಿವಾಸಮೂರ್ತಿಯವರು ಕಳಿಸಿರುವ ಮನವಿಯನ್ನು ಅವರು ಕಂದಾಯ ಸಚಿವರಿಗೆ ಸೂಕ್ತ ಕ್ರಮಕ್ಕೆ ರವಾನಿಸಿದ್ದಾರೆ. ಈ ಸಲದ ವಿಧಾನ ಸಭಾಧಿವೇಶನದಲ್ಲಿ ಈ ವಿಷಯ ಚರ್ಚೆಗೆ ಬರುವ ನಿರೀಕ್ಷೆಯಿದೆಯೆಂದು ತಿಳಿದು ಬಂದಿದೆ.



## ಕೃತಜ್ಞತೆಗಳು

ಕೆರೆಕಟ್ಟೆ-ಶೃಂಗೇರಿ-ಕೊಪ್ಪ-ತೀರ್ಥಹಳ್ಳಿ ಮಾರ್ಗವಾಗಿ 4ನೇ ರಾಷ್ಟ್ರೀಯ ಹೆದ್ದಾರಿಯವರೆಗಿನ ಮಾರ್ಗವನ್ನು ರಾಜ್ಯ ಹೆದ್ದಾರಿಯಾಗಿ ಪರಿವರ್ತಿಸಲು ಶ್ರಮಿಸಿದ ಶೃಂಗೇರಿ ಕ್ಷೇತ್ರದ ಶಾಸಕರಾದ **ಶ್ರೀಯುತ ಎಚ್. ಜಿ. ಗೋವಿಂದ ಗೌಡರಿಗೆ,** ಈ ಕಾರ್ಯಕ್ಕೆ ಮಂಜೂರಾತಿ ನೀಡಿದ ರಾಜ್ಯ ಸರ್ಕಾರಕ್ಕೆ ಹಾಗೂ ಈ ಕಾರ್ಯದಲ್ಲಿ ಶ್ರಮಿಸಿದ ಇಲಾಖಾ ಅಧಿಕಾರಿಗಳಿಗೆ ನೆಮ್ಮಾರು ಮಂಡಲ ವ್ಯಾಪ್ತಿಯ ಜನತೆಯ ಪರವಾಗಿ ಕೃತಜ್ಞತೆಗಳನ್ನು ಸಲ್ಲಿಸುತ್ತೇವೆ. ಈ ಕಾರ್ಯಕ್ಕೆ ಅಗತ್ಯವಾದ ಹಣಕಾಸು ಈ ವರ್ಷವೇ ಮಂಜೂರಾಗಿ, ಅಗತ್ಯ ಕಾಮಗಾರಿಗಳು ಶೀಘ್ರವೇ ಮುಗಿಯುವಂತೆಯೂ ಮಾನ್ಯ ಶಾಸಕರು ಪ್ರಯತ್ನಿಸುತ್ತಾರೆಂದು ಆಶಿಸುತ್ತೇವೆ.

**ಎಂ. ಜಿ. ಸುಧಾಕರ ಹೆಗ್ಡೆ** — ಪ್ರಧಾನರು

**ಟಿ. ಕಾಳಯ್ಯ** — ಉಪ ಪ್ರಧಾನರು

**ಮತ್ತು ಸದಸ್ಯರು, ನೆಮ್ಮಾರು ಮಂ॥ ಪಂಚಾಯ್ತಿ, ಶೃಂಗೇರಿ ತಾ॥**

## ಶಾಸಕರಿಗೆ ಅಭಿನಂದನೆಗಳು

ಕೆರೆಕಟ್ಟೆಯಿಂದ ಶೃಂಗೇರಿ, ಕೊಪ್ಪ, ತೀರ್ಥಹಳ್ಳಿ ಮಾರ್ಗವಾಗಿ ಹಾನಗಲ್ ಸಮೀಪ ರಾಷ್ಟ್ರೀಯ ಹೆದ್ದಾರಿಗೆ ಸೇರುವಂತೆ ರಾಜ್ಯ ಹೆದ್ದಾರಿ ಸಂಪರ್ಕ ಕಲ್ಪಿಸುವಲ್ಲಿ ಶ್ರಮಿಸಿದ ಜನಾನುರಾಗಿ ಶಾಸಕರಾದ **ಶ್ರೀಯುತ ಎಚ್. ಜಿ. ಗೋವಿಂದ ಗೌಡರಿಗೂ,** ಈ ವಿಚಾರದಲ್ಲಿ ಅಗತ್ಯ ಕೆಲಸಗಳನ್ನು ನಿರ್ವಹಿಸಿದ ಇಲಾಖಾಧಿಕಾರಿಗಳಿಗೂ ಈ ಭಾಗದ ಜನತೆಯ ಪರವಾಗಿ ಅಭಿನಂದನೆಗಳನ್ನು ಸಲ್ಲಿಸುತ್ತೇವೆ.

**ಕೆ. ಎ. ರವೀಂದ್ರ ನಾಥ್,**

**ಎನ್. ಎಲ್. ಶ್ರೀನಿವಾಸ ಹೆಗ್ಡೆ,**

**ಜಿ. ವಿ. ನಾಗೇಶ್**

ಮತ್ತು ಗ್ರಾಮಸ್ಥರು, ನೆಮ್ಮಾರು

## ಚಿಕ್ಕಮಗಳೂರು ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿಯಮಿತ

ರತ್ನಗಿರಿ ರಸ್ತೆ : ಚಿಕ್ಕಮಗಳೂರು 577 101

**ಕೊಪ್ಪ ಶಾಖೆ-577 126**

ತಾ॥ 31. 8. 87

## ಹರಾಜು ನೋಟೀಸು

ಈ ಕೆಳಗಿನ ಮಹನೀಯರು, ನಮ್ಮ ಶಾಖೆಯಿಂದ ಚಿನ್ನಾಭರಣ, ನಗಗಳ ಈಡಿನ ಮೇಲೆ ಪಡೆದ ಸಾಲವನ್ನು ವಾಯಿದೆಗೆ ಸರಿಯಾಗಿ ಮರುಪಾವತಿ ಮಾಡದೆ ಇದ್ದುದರಿಂದ ಸದ್ರಿಯವರಿಗೆ ರಿಜಿಸ್ಟ್ರಿ ನೋಟೀಸು ಮೂಲಕ ಕೇಳಿಕೊಂಡಿದ್ದಂತೆ, ಕೆಲವರಿಗೆ ಕಳುಹಿಸಿದ ರಿಜಿಸ್ಟ್ರಿ ನೋಟೀಸುಗಳು ಕಾರಣಾಂತರದಿಂದ ನಮಗೇನೇ ವಾಪಾಸ್ ಬಂದಿರುವುದರಿಂದಲೂ, ಸದ್ರಿಯವರಿಗೆ ವ ಅವರ ವಾರೀಸುದಾರರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಸಾಲದ ಬಾಬ್ತು ಬ್ಯಾಂಕಿಗೆ ಸಲ್ಲತಕ್ಕ ಮೊಬಲಗನ್ನು ಇದೇ ತಿಂಗಳ ತಾ॥ 23.9.87ರ ಒಳಗೆ ಬ್ಯಾಂಕಿಗೆ ಮರುಪಾವತಿ ಮಾಡಲು ತಪ್ಪಿದಲ್ಲಿ ಸದ್ರಿಯವರು ನಮ್ಮಲ್ಲಿ ಅಡವಿಟ್ಟ ನಗಗಳನ್ನು ತಾ॥ 24.9.87ರ ಅಪರಾಹ್ನ ಗಂಟೆ 3.00ಕ್ಕೆ ಸರಿಯಾಗಿ ಬ್ಯಾಂಕಿನ ವಠಾರದಲ್ಲಿ ಬಹಿರಂಗ ಯಾ ಖಾಸಗಿಯಾಗಿ ಹರಾಜು ಮಾಡಲಾದೀತು. ಈ ಸಂಬಂಧ ಬ್ಯಾಂಕಿಗೆ ಉಂಟಾಗಬಹುದಾದ ಸಕಲ ಖರ್ಚು ವ ನಷ್ಟವನ್ನು ತೆರಲು ಸದ್ರಿ ಸಾಲಗಾರರು ಜವಾಬ್ದಾರರಾಗಿರುತ್ತಾರೆ ತಿಳಿದಿರಲಿ.

| ಕ್ರ.ಸಂ. | ಸಾಅದ ನಂ. | ಸಾಲಗಾರನ ಹೆಸರು ಮತ್ತು ವಿಳಾಸ | ಮೊಬಲಗು |
|---|---|---|---|
| 1. | 230/85 | ಎ. ಎಲ್. ಮಹೇಂದ್ರ ಬಿನ್ ಲಕ್ಷ್ಮಣಗೌಡ C/O ಎ. ಎನ್. ಗೋಪಾಲನಾಯ್ಕ, ದೋರಗಲ್, ಹಿರೇಕೊಡಿಗೆ ಅಂಚೆ | 2567 |
| 2. | 251/85 | ಬಿ. ಕೆ. ಶಂಕರಪ್ಪ ಬಿನ್ ಕಳಸಪ್ಪ ಗೌಡ, ಗಾಳಿಗುಡ್ಡೆ, ಸೂರ್ಯದೇವಸ್ಥಾನ ಅಂಚೆ | 2403 |
| 3. | 287/85 | ಬಿ. ಎಸ್. ಸದಾಶಿವರಾವ್ ಬಿನ್ ಕೆ. ಶಿವಶಂಕರ್ ರಾವ್ ಗುಡ್ಡೇತೋಟ ಅಂಚೆ | 2110 |
| 4. | 307/85 | ಕೆ. ಪ್ರಭಾಕರ ಬಿನ್ ಅಣ್ಣಾರಾವ್, ತಿಲಕ್ ರಸ್ತೆ, ಕೊಪ್ಪ ಅಂಚೆ | 2220 |
| 5. | 328/86 | ಎ. ಎಸ್. ಚಂದ್ರಶೇಖರ ರಾವ್ ಬಿನ್ ಸೀತಾರಾಮಯ್ಯ, ಅರಸಿತೋಟ ಕಲ್‌ಕೆರೆ ಅಂಚೆ | 3247 |

ಕೊಪ್ಪ
ತಾ. 31.8.1987

ವ್ಯವಸ್ಥಾಪಕರು
ಕೊಪ್ಪ ಶಾಖೆ

ಸಂಪಾದಕ, ಮುದ್ರಕ ಮತ್ತು ಪ್ರಕಾಶಕ: ಶಿವಮನೆ ನಾಗರಾಜ್, ಅಚ್ಚು: ದೀಪಿಕಾ ಅಚ್ಚುಕೂಟ, ಕೊಪ್ಪ